MYSORE SAMSKRITA PRATHAMA EXAMINATION—1971-74

# MITRALABHA

मैसूर् संस्कृतप्रथमपरिक्षा – १९७१-७४

# मित्रलाभः

ಕನ್ನಡ ಪ್ರತಿಪದಾರ್ಥ ತಾತ್ಪರ್ಯಾದಿಗಳಿಂದ ಕೂಡಿದೆ.

FIRST EDITION

*Edited by*

**K. NARASIMHACHAR**
Sahitya Vidwan & Siromani
(Retired Alankara Sastra Professor)

1969

 [Price Rs. 2–25

MYSORE SAMSKRITA PRATHAMA EXAMINATION—1971-74

# MITRALABHA

मैसूर् संस्कृतप्रथमपरिक्षा—१९७१-७४

# मित्रलाभः

ಕನ್ನಡ ಪ್ರತಿಪದಾರ್ಥ ತಾತ್ಪರ್ಯಾದಿಗಳಿಂದ ಕೂಡಿದೆ.

FIRST EDITION

*Edited by*

**K. NARASIMHACHAR**
Sahitya Vidwan & Siromani
(Retired Alankara Sastra Professor)

1969

 [Price Rs. 2–25

# ಉಪೋದ್ಘಾತ

ನಮ್ಮಿ ಭಾರತ ಭೂಮಿಯಲ್ಲಿ ಜನರ ನಡೆನುಡಿಗಳನ್ನು ತಿದ್ದುವ ಸಲುವಾಗಿ ಹಲವಾರು ನೀತಿ ಗ್ರಂಥಗಳು ಕವಿಗಳಿಂದ ರಚಿತವಾಗಿವೆ. ಈ ನೀತಿ ಗ್ರಂಥ ಗಳಿಗೆ ಉಪನಿಷತ್ತು, ಮಹಾಭಾರತ ಮುಂತಾದ ಗ್ರಂಥಗಳು ಮೂಲವಾಗಿರ ಬಹುದೆಂದು ತೋರುತ್ತದೆ. ಅದರಂತೆ ಕ್ರಿಸ್ತಶಕ 3ನೆ ಶತಮಾನದಲ್ಲಿದ್ದ ವಿಷ್ಣುಶರ್ಮನೆಂಬ ನೀತಿಶಾಸ್ತ್ರ ಪಂಡಿತನು ಮಹಿಲಾರೋಪ್ಯದ ರಾಜನಾದ ಅಮರಶಕ್ತಿಯ ಮೂರು ಮಂದಿ ಮೂರ್ಖ ಮಕ್ಕಳನ್ನು ನೀತಿಶಾಸ್ತ್ರಜ್ಞಾನಿ ಗಳನ್ನಾಗಿಸಲು ಪಂಚತಂತ್ರ ಗ್ರಂಥವನ್ನು ಬರೆದನು. ಇದರಲ್ಲಿ ಮಿತ್ರಭೇದ, ಮಿತ್ರಸಂಪ್ರಾಪ್ತಿ, ಕಾಕೋಲೂಕೀಯ, ಲಬ್ಧಪ್ರಣಾಶ, ಅಪರೀಕ್ಷಿತಕಾರಕಾಣಿ ಎಂಬ ಐದು ತಂತ್ರಗಳಿವೆ. ಇದನ್ನೇ ಆಧಾರವಾಗಿಟ್ಟುಕೊಂಡು ಬಂಗಾಳದ ಧವಲಚಂದ್ರನ ಆಶ್ರಯದಲ್ಲಿದ್ದ ನಾರಾಯಣ ಪಂಡಿತನು ಹಿತೋಪದೇಶ ವೆಂಬ ಸರಳವಾದ ನೀತಿಗ್ರಂಥವನ್ನು ರಚಿಸಿದನು. ಇವನು 10 ರಿಂದ 12ನೆ ಶತಮಾನದೊಳಗಿದ್ದನೆಂದು ಪ್ರಸಿದ್ಧಿಯಿದೆ. ಆದರೆ ವಿಷ್ಣುಶರ್ಮನು ಭಾಗೀರಥೀ ತೀರದಲ್ಲಿರುವ ಪಾಟಲೀಪುತ್ರವೆಂಬ ನಗರದ ಸುದರ್ಶನನೆಂಬ ಅರಸನ ಮೂರ್ಖ ಮಕ್ಕಳನ್ನು ನೀತಿಬೋಧನೆಯಿಂದ ನೀತಿಶಾಸ್ತ್ರಜ್ಞರನ್ನಾಗಿ ಮಾಡಿದ ನೆಂದು ಹಿತೋಪದೇಶದ ಪ್ರಸ್ತಾವಿಕೆಯಲ್ಲಿ ಕಂಡುಬರುವುದು. ಎಂದರೆ ರಾಜನ ಮತ್ತು ದೇಶದ ಹೆಸರು ಬದಲಾವಣೆಯಾದಂತೆ ತೋರುತ್ತದೆ. ಇದಕ್ಕೆ ಕಾರಣ, ತಿಳಿಯಲಿಲ್ಲ.

ಈ ಹಿತೋಪದೇಶದಲ್ಲಿ ಮಿತ್ರಲಾಭ, ಸುಹೃದ್ಭೇದ, ವಿಗ್ರಹ, ಸಂಧಿಯೆಂದು ನಾಲ್ಕು ಪ್ರಕರಣಗಳಿವೆ. ಪ್ರಕೃತ ಈ ಹೊತ್ತಿಗೆಯಲ್ಲಿ ವಿದ್ಯಾ ಇಲಾಖೆಯು ವರು 1971–1974ವರೆಗೆ ಮೈಸೂರು ಸಂಸ್ಕೃತ ಪರೀಕ್ಷೆಗೆ ನಿರ್ದೇಶಿಸಿರುವ ಮಿತ್ರಲಾಭವೆಂಬ ಪಠ್ಯಭಾಗವನ್ನು ಕನ್ನಡದಲ್ಲಿ ಪ್ರತಿಪದಾರ್ಥ, ತಾತ್ಪರ್ಯ ಸಹಿತವಾಗಿ ಕೊಡಲಾಗಿದೆ. ಮತ್ತು ಕೊನೆಯಲ್ಲಿ ಕಥಾಸಾರಾಂಶ, ಪರೀಕ್ಷೆಯ ಮಾದರಿ ಪ್ರಶ್ನೆಗಳನ್ನು ಕೊಟ್ಟಿರುತ್ತೇನೆ. ಮೈಸೂರು ಸಂಸ್ಕೃತ ಪ್ರಥಮ ಪರೀಕ್ಷೆಯ ವಿದ್ಯಾರ್ಥಿಗಳ ಸಲುವಾಗಿ ಅಚ್ಚು ಮಾಡಿಸಿರುವ ಈ ಪುಸ್ತಕದಿಂದ ಅವರಿಗೆ ಪ್ರಯೋಜನವಾದರೆ ನಾನು ಕೃತಾರ್ಥನಾದಂತೆಯೇ.

ಬೆಂಗಳೂರು ೧೮. ಇತಿ ವಿದುಷಾಂ ಅನುಚರಃ

೨–೧೦–೧೯೭೧. ಕೋ. ನರಸಿಂಹಾಚಾರ್ಯಃ

श्रीहयग्रीवाय नमः

# हितोपदेशः

## मित्रलाभः

೧. अथ प्रासादपृष्ठे सुखोपविष्टानां राजपुत्राणां पुरस्तात्प्रस्तावक्रमेण स पण्डितोऽब्रवीत्—

೨. 'काव्यशास्त्रविनोदेन कालो गच्छति धीमताम् ।
व्यसनेन च मूर्खाणां निद्रया कलहेन वा ॥ १ ॥

೩. तद्भवतां विनोदाय काककूर्मादीनां विचित्रां कथां कथयामि ।'

---

೧. ಅರ್ಥ॥ ಅಥ = ತರುವಾಯ, ಪ್ರಾಸಾದ ಪೃಷ್ಠೇ = ಅರಮನೆಯ ಕೊನೆಯಲ್ಲಿ, ಸುಖ = ಸೌಖ್ಯದಿಂದ, ಉಪವಿಷ್ಟಾನಾಂ = ಕೂತುಕೊಂಡಿರುವ, ರಾಜ-ಪುತ್ರಾಣಾಂ = ದೊರೆಮಕ್ಕಳ, ಪುರಸ್ತಾತ್ = ಮುಂದೆ, ಪ್ರಸ್ತಾವಕ್ರಮೇಣ = ಮಾತಿನ ಸಂದರ್ಭದ ರೀತಿಯಿಂದ, ಸಃ = ಆ, ಪಂಡಿತಃ = ವಿದ್ವಾಂಸನಾದ ವಿಷ್ಣುಶರ್ಮನು, ಅಬ್ರವೀತ್ = ಹೇಳಿದನು.

೨. ಅರ್ಥ॥ ಧೀಮತಾಂ = ಬುದ್ಧಿವಂತರ, ಕಾಲಃ = ಸಮಯವು, ಕಾವ್ಯ = ರಘುವಂಶಾದಿ ಕಾವ್ಯಗಳು, ಶಾಸ್ತ್ರ = ವ್ಯಾಕರಣಾದಿ ಶಾಸ್ತ್ರಗಳು ಇವುಗಳ, ವಿನೋದೇನ = ತಮಾಷೆಯಿಂದ, ಗಚ್ಛತಿ = ಕಳೆಯುತ್ತದೆ. ಮೂರ್ಖಾಣಾಂ = ದಡ್ಡರ, (ಸಮಯವು) ವ್ಯಸನೇನ = ಜೂಜು ಮೊದಲಾದ ಚಟದಿಂದ, ನಿದ್ರಯಾ = ನಿದ್ರೆಯಿಂದ, ಚ = ಮತ್ತು, ಕಲಹೇನ ವಾ = ಜಗಳದಿಂದಾಗಲಿ, ಗಚ್ಛತಿ = ಕಳೆಯುತ್ತದೆ.

ತಾತ್ಪರ್ಯ॥ ವಿದ್ವಾಂಸರು ಕಾವ್ಯಶಾಸ್ತ್ರ ಮೊದಲಾದವುಗಳನ್ನು ವಿಚಾರಮಾಡುತ್ತ ವಿನೋದದಿಂದ ಸಮಯವನ್ನು ಕಳೆಯುತ್ತಾರೆ. ಬುದ್ಧಿಯಿಲ್ಲದವರು ಜೂಜಾಟ, ಮದ್ಯಪಾನ, ಸ್ತ್ರೀಸಂಗ, ನಿದ್ರೆ, ಜಗಳ ಇವುಗಳಿಂದ ಕಾಲವನ್ನು ಕಳೆಯುತ್ತಾರೆ.

೩. ಅರ್ಥ॥ ತತ್ = ಆದ್ದರಿಂದ, ಭವತಾಂ = ನಿಮ್ಮ, ವಿನೋದಾಯ =

೪. राजपुत्रैरुक्तम्—'आर्य, कथ्यताम् ।' विष्णुशर्मोवाच—'शृणुत । सम्प्रति मित्रलाभः प्रस्तूयते यस्यायमाद्यः श्लोकः—

೫. असाधना वित्तहीना बुद्धिमन्तः सुहृत्तमाः ।
साधयन्त्याशु कार्याणि काककूर्ममृगाखुवत् ॥ २ ॥'

೬. राजपुत्रा ऊचुः – 'कथमेतत् ।' विष्णुशर्मा कथयति—

---

ವಿನೋದಕ್ಕಾಗಿ, ಕಾಕ = ಕಾಗೆ, ಕೂರ್ಮ = ಆಮೆ ಇವುಗಳೆ, ಆದೀನಾಂ = ಮೊದಲಾದುವುಗಳ, ವಿಚಿತ್ರಾಂ = ಆಶ್ಚರ್ಯಕರವಾದ, ಕಥಾಂ = ಕಥೆಯನ್ನು, ಕಥಯಾಮಿ = ಹೇಳುತ್ತೇನೆ

೪. ಅರ್ಥ॥ ರಾಜಪುತ್ರೈಃ = ರಾಜಕುಮಾರರಿಂದ, ಉಕ್ತಂ = ಹೇಳಲ್ಪಟ್ಟಿತು. ಆರ್ಯ = ಪೂಜ್ಯರೆ ! ಕಥ್ಯತಾಮ್ = ಹೇಳಲ್ಪಡಲಿ. ವಿಷ್ಣುಶರ್ಮಾ = ವಿಷ್ಣುಶರ್ಮನು, ಉವಾಚ = ಹೇಳಿದನು. ಶೃಣುತ = ಕೇಳಿರಿ. ಸಂಪ್ರತಿ = ಈಗ, ಮಿತ್ರಲಾಭಃ = ಮಿತ್ರಲಾಭ (ಸ್ನೇಹಿತರನ್ನು ಪಡೆಯುವಿಕೆ) ಎಂಬ ಪ್ರಬಂಧವು, ಪ್ರಸ್ತೂಯತೇ = ಹೇಳಲು ಆರಂಭಿಸಲ್ಪಡುತ್ತದೆ. ಅಯಂ = ಇದು, ಯಸ್ಯ = ಯಾವ ಮಿತ್ರಲಾಭಹ, ಆದ್ಯಃ = ಮೊದಲನೆಯ, ಶ್ಲೋಕಃ = ಪದ್ಯವೊ.

೫. ಅರ್ಥ॥ ಅಸಾಧನಾಃ = ಸಾಮಗ್ರಿಗಳಿಲ್ಲದ, ವಿತ್ತಹೀನಾಃ = ಹಣವಿಲ್ಲದ, ಸುಹೃತ್ತಮಾಃ = ಅತ್ಯಂತ ಸ್ನೇಹಿತರಾದ, ಬುದ್ಧಿಮಂತಃ = ಬುದ್ಧಿಶಾಲಿಗಳು, ಕಾಕ = ಕಾಗೆ, ಕೂರ್ಮ = ಆಮೆ, ಮೃಗ = ಜಿಂಕೆ, ಆಖುವತ್ = ಇಲಿ ಇವುಗಳಂತೆ, ಆಶು = ಬೇಗನೆ, ಕಾರ್ಯಾಣಿ = ಕೆಲಸಗಳನ್ನು, ಸಾಧಯಂತಿ = ಸಾಧಿಸುತ್ತಾರೆ.

ತಾ॥ ಬುದ್ಧಿಶಾಲಿಗಳಾದ ಸ್ನೇಹಿತರು ಕಾರ್ಯಗಳನ್ನು ನೆರವೇರಿಸಲು ಬೇಕಾದ ಉಪಕರಣ, ಹಣ ಇವುಗಳಿಲ್ಲದಿದ್ದರೂ ತಮ್ಮ ಬುದ್ಧಿಶಕ್ತಿಯಿಂದ ಕಾಗೆ, ಆಮೆ, ಜಿಂಕೆ, ಇಲಿ ಇವುಗಳಂತೆ ಶೀಘ್ರವಾಗಿ ಕೆಲಸಗಳನ್ನು ನೆರವೇರಿಸುತ್ತಾರೆ.

೬. ಅರ್ಥ॥ ರಾಜಪುತ್ರಾಃ = ದೊರೆಮಕ್ಕಳು, ಏತತ್ = ಇದು, ಕಥಂ =

२. अस्ति गोदावरीतीरे विशालः शाल्मलीतरुः । तत्र नानादिग्देशादागत्य रात्रौ पक्षिणो निवसन्ति । अथ कदाचिदवसन्नायां रात्रावस्ताचलचूडावलम्बिनि भगवति कुमुदिनीनायके चन्द्रमसि लघुपतनकनामा वायसः प्रबुद्धः कृतान्तमिव द्वितीयमायान्तं व्याधमपश्यत् । तमवलोक्याचिन्तयत्—'अद्य प्रातरेवानिष्टदर्शनं जातम् । न जाने किमनभिमतं दर्शयिष्यति' । इत्युक्त्वा तदनुसरणक्रमेण व्याकुलश्चलितः । यतः ।

---

ಹೇಗೆ ಎಂದು, ಊಚುಃ = ಹೇಳಿದರು. ವಿಷ್ಣುಶರ್ಮಾ = ವಿಷ್ಣುಶರ್ಮನು, ಕಥಯತಿ = ಹೇಳುತ್ತಾನೆ.

೨. ಅರ್ಥ॥ ಗೋದಾವರೀತೀರೇ = ಗೋದಾವರೀ ನದಿಯ ದಡದಲ್ಲಿ. ವಿಶಾಲಃ = ವಿಸ್ತಾರವಾದ, ಶಾಲ್ಮಲೀತರುಃ = ಬೂರಗದ ಮರವು, ಅಸ್ತಿ = ಇದೆ. ತತ್ರ = ಅಲ್ಲಿ, ರಾತ್ರೌ = ರಾತ್ರಿಕಾಲದಲ್ಲಿ, ಪಕ್ಷಿಣಃ = ಹಕ್ಕಿಗಳು, ನಾನಾದೇಶಾತ್ = ಅನೇಕ ದೇಶಗಳಿಂದ, ಆಗತ್ಯ = ಬಂದು, ನಿವಸಂತಿ = ವಾಸಮಾಡುತ್ತವೆ. ಅಥ = ಬಳಿಕ, ಕದಾಚಿತ್ = ಒಂದಾನೊಂದು ವೇಳೆ, ರಾತ್ರೌ = ಇರುಳು, ಅವಸನ್ನಾಯಾಂ = ಮುಗಿಯಲು, ಭಗವತಿ = ಪೂಜ್ಯನಾದ, ಕುಮುದಿನೀನಾಯಕೇ = ನೈದಿಲೆಯ ಪ್ರಿಯನಾದ, ಚಂದ್ರಮಸಿ = ಚಂದ್ರನು, ಅಸ್ತಾಚಲ = ಮುಳುಗುವ ಪರ್ವತದ, ಚೂಡಾವಲಂಬಿನಿ = ಶಿಖರವನ್ನು ಆಶ್ರಯಿಸಲು, (ಮುಳುಗಲು) ಲಘುಪತನಕನಾಮಾ = ಲಘುಪತನಕವೆಂಬ, ವಾಯಸಃ = ಕಾಗೆಯು, ಪ್ರಬುದ್ಧಃ = ಎಚ್ಚರಗೊಂಡದ್ದಾಗಿ, ದ್ವಿತೀಯಂ = ಎರಡನೆ, ಕೃತಾಂತಂ ಇವ = ಯಮನಂತಿರುವ, ಆಯಾಂತಂ = ಬರುತ್ತಿರುವ, ವ್ಯಾಧಂ = ಬೇಡನನ್ನು, ಅಪಶ್ಯತ್ = ನೋಡಿತು. ತಂ = ಅವನನ್ನು, ಅವಲೋಕ್ಯ = ನೋಡಿ, ಅಚಿಂತಯತ್ = ಆಲೋಚಿಸಿತು. 'ಅದ್ಯ = ಈ ದಿನ, ಪ್ರಾತಃ ಏವ = ಬೆಳಗ್ಗೇನೆ, ಅನಿಷ್ಟದರ್ಶನಂ = ಕೆಟ್ಟವನ ನೋಟವು, ಜಾತಂ = ಉಂಟಾಯಿತು. ಅನಭಿಮತಂ = ಇಷ್ಟವಲ್ಲದ, ಕಿಂ = ಏನನ್ನು, ದರ್ಶಯಿಷ್ಯತಿ = ತೋರಿಸುವನೊ, ನ ಜಾನೇ = ತಿಳಿಯೆನು' ಇತಿ ಉಕ್ತ್ವಾ

೮. शोकस्थानसहस्राणि भयस्थानशतानि च ।
दिवसे दिवसे मूढमाविशन्ति न पण्डितम् ॥ ३ ॥

೯. अन्यच्च । विषयिणामिदमवश्यं कर्तव्यम् ।

೧೦. उत्थायोत्थाय बोद्धव्यं महद्भयमुपस्थितम् ।
मरणव्याधिशोकानां किमद्य निपतिष्यति ॥ ४ ॥

---

= ಹಿಗೆಂದು ಹೇಳಿ, ತದನುಸರಣಕ್ರಮೇಣ = ಅವನನ್ನು ಹಿಂಬಾಲಿಸುವ ರೀತಿಯಿಂದ, ವ್ಯಾಕುಲಃ = ವ್ಯಥೆಗೊಂಡದ್ದಾಗಿ, ಚಲಿತಃ = ಹೊರಟಿತು. ಯತಃ = ಯಾವ ಕಾರಣದಿಂದ,

೮. ಅ॥ ಶೋಕಸ್ಥಾನಸಹಸ್ರಾಣಿ = ಸಾವಿರ ದುಃಖದ ವಿಷಯಗಳು, ಭಯಸ್ಥಾನಶತಾನಿ ಚ = ನೂರು ಹೆದರಿಕೆಯ ವಿಷಯಗಳು, ದಿವಸೇ ದಿವಸೇ = ಪ್ರತಿದಿನವೂ, ಮೂಢಂ = ದಡ್ಡನನ್ನು, ಆವಿಶಂತಿ = ಪ್ರವೇಶಿಸುತ್ತವೆ. ಪಂಡಿತಂ = ವಿದ್ವಾಂಸನನ್ನು, ನ = ಪ್ರವೇಶಿಸುವುದಿಲ್ಲ. (ಆಕ್ರಮಿಸುವುದಿಲ್ಲ)

ತಾ॥ ತಿಳಿವಳಿಕೆಯಿಲ್ಲದಿರುವುದರಿಂದ ದಡ್ಡನು ಪ್ರತಿದಿನವೂ ಅನೇಕ ದುಃಖಗಳೂ, ಭಯಗಳೂ ಒದಗಿದಾಗ ವ್ಯಥೆಗೊಳ್ಳುವನು. ವಿದ್ವಾಂಸನು ವಿವೇಚನೆಯಿಂದ ಅವುಗಳನ್ನು ನಿವಾರಿಸಿಕೊಳ್ಳುವನು.

೯. ಅ॥ ಅನ್ಯಚ್ಚ = ಮತ್ತೂ, ಇದಂ = ಈ ಮುಂದೆ ಹೇಳುವುದು, ವಿಷಯಿಣಾಂ = ಸಂಸಾರಿಗಳಿಗೆ, ಅವಶ್ಯಂ = ನಿಶ್ಚಯವಾಗಿಯೂ, ಕರ್ತವ್ಯಂ = ಮಾಡತಕ್ಕದ್ದಾಗಿದೆ.

೧೦. ಅ॥ ಮರಣ = ಸಾವು, ವ್ಯಾಧಿ = ಕಾಯಿಲೆ, ಶೋಕಾನಾಂ = ದುಃಖಗಳು ಇವುಗಳಲ್ಲಿ, ಅದ್ಯ = ಈ ದಿನ, ಕಿಂ = ಯಾವುದು, ನಿಪತಿಷ್ಯತಿ = ಸಂಭವಿಸುವುದು. (ಎಂದು) ಉತ್ಥಾಯ ಉತ್ಥಾಯ = ಎದ್ದು, ಎದ್ದು, ಉಪಸ್ಥಿತಂ = ಸಮೀಪಿಸಿದ, ಮಹತ್ = ದೊಡ್ಡ, ಭಯಂ = ಹೆದರಿಕೆಯು, ಬೋದ್ಧವ್ಯಂ = ತಿಳಿಯತಕ್ಕದು.

ತಾ॥ ಸಂಸಾರಿಯು ಸಾವು, ಕಾಯಿಲೆ, ದುಃಖ ಇವುಗಳಲ್ಲಿ ಈ ದಿನ

೧೧. अथ तेन व्याधेन तण्डुलकणान्विकीर्य जालं विस्तीर्णम् । स च प्रच्छन्नो भूत्वा स्थितः । तस्मिन्नेव काले चित्रग्रीवनामा कपोतराजः सपरिवारो वियति विसर्पन् तान् तण्डुलकणानवलोकयामास । ततः कपोतराजस्तण्डुलकणलुब्धान्कपोतान्प्रत्याह-कुतोऽत्र निर्जने वने तण्डुलकणानां सम्भवः । तन्निरूप्यतां तावत् । भद्रमिदं न पश्यामि । प्रायेणानेन तण्डुलकणलोभेनास्माभिरपि तथा भवितव्यम् ।

---

ಯಾವುದು ಸಂಭವಿಸೀತು ಎಂದು ಆಗಾಗ ಜಾಗರೂಕತೆಯಿಂದ ತಿಳಿದು ಕೊಳ್ಳುತ್ತಿರಬೇಕು.

೧೧. ಅ॥ ಅಥ = ಬಳಿಕ, ತೇನ = ಆ, ವ್ಯಾಧೇನ = ಬೇಡನಿಂದ, ತಂಡುಲ ಕಣಾನ್ = ಅಕ್ಕಿಯ ಕಾಳುಗಳನ್ನು, ವಿಕೀರ್ಯ = ಚೆಲ್ಲಿ, ಜಾಲಂ = ಬಲೆಯು; ವಿಸ್ತೀರ್ಣಂ = ಹರವಲ್ಪಟ್ಟಿತು. ಸ ಚ = ಅವನೂ, ಪ್ರಚ್ಛನ್ನಃ ಭೂತ್ವಾ = ಅಡಗಿದವನಾಗಿ, ಸ್ಥಿತಃ = ಇದ್ದನು. ತಸ್ಮಿನ್ ಏವ ಕಾಲೇ = ಅದೇ ಸಮಯ ದಲ್ಲಿ, ಚಿತ್ರಗ್ರೀವನಾಮಾ = ಚಿತ್ರಗ್ರೀವನೆಂದು ಹೆಸರುಳ್ಳ, ಕಪೋತರಾಜಃ = ಪಾರಿವಾಳಗಳ ದೊರೆಯು, ಸಪರಿವಾರಃ = ಜೊತೆಯವರಿಂದ ಸಹಿತನಾಗಿ, ವಿಯತಿ = ಆಕಾಶದಲ್ಲಿ, ವಿಸರ್ಪನ್ = ಚಲಿಸುತ್ತ, (ಹಾರುತ್ತ) ತಾನ್ = ಆ, ತಂಡುಲಕಣಾನ್ = ಅಕ್ಕಿಕಾಳುಗಳನ್ನು, ಅವಲೋಕಯಾಮಾಸ = ನೋಡಿತು. ತತಃ = ತರುವಾಯ, ಕಪೋತರಾಜಃ = ಪಾರಿವಾಳದ ದೊರೆಯು, ತಂಡುಲ-ಕಣಲುಬ್ಧಾನ್ = ಅಕ್ಕಿಕಾಳುಗಳಲ್ಲಿ ಆಶೆಗೊಂಡ, ಕಪೋತಾನ್ ಪ್ರತಿ = ಪಾರಿ ವಾಳಗಳನ್ನು ಕುರಿತು, ಆಹ = ಹೇಳಿತು. ನಿರ್ಜನೇ = ಜನರಿಲ್ಲದ, ಅತ್ರ ವನೇ = ಈ ಕಾಡಿನಲ್ಲಿ, ತಂಡುಲಕಣಾನಾಂ = ಅಕ್ಕಿಕಾಳುಗಳ, ಸಂಭವಃ = ಇರುವಿ ಕೆಯು, ಕುತಃ = ಎಲ್ಲಿಂದ.? ತತ್ = ಆದ್ದರಿಂದ, ನಿರೂಪ್ಯತಾಂ ತಾವತ್ = ಆಲೋಚಿಸಲ್ಪಡಲಿ. ಇದಂ = ಇದನ್ನು, ಭದ್ರಂ = ಮಂಗಳಕರವನ್ನಾಗಿ, ನ ಪಶ್ಯಾಮಿ = ನೋಡುವುದಿಲ್ಲ. ಪ್ರಾಯೇಣ = ಬಹಳಮಟ್ಟಿಗೆ, ಅನೇನ = ಈ, ತಂಡುಲಕಣಲೋಭೇನ = ಅಕ್ಕಿಕಾಳುಗಳ ಆಶೆಯಿಂದ, ಅಸ್ಮಾಭಿಃ ಅಪಿ = ನಮ್ಮಿಂದಲೂ, ತಥಾ = ಹಾಗೆ, ಭವಿತವ್ಯಂ = ಆಗತಕ್ಕದು.

ಬ್ಯಾಮ್ಮೆ ತ್ರುಂಯಿಗೆ

೧೨. कङ्कणस्य तु लोभेन मग्नः पङ्के सुदुस्तरे ।
वृद्धव्याघ्रेण सम्प्राप्तः पथिकः स मृतो यथा' ॥ ५ ॥

೧೩. कपोताः ऊचुः—'कथमेतत् ।' सोऽब्रवीत्—

कथा १

೧೪. 'अहमेकदा दक्षिणारण्ये चरन्नपश्यम् । एको वृद्धो व्याघ्रः स्नातः कुशहस्तः सरस्तीरे ब्रूते—भो भोः पान्थाः, इदं सुवर्णकङ्कणं गृह्यताम्' । ततो लोभाकृष्टेन केनचित्पान्थेनालोचितम् 'भाग्येनैतत्सम्भवति । किन्त्वस्मिन्नात्मसन्देहे प्रवृत्तिर्न विधेया । यतः ।

---

೧೨. ಅ॥ ಕಂಕಣಸ್ಯ = ಬಳೆಯ, ಲೋಭೇನ ತು = ಆಶೆಯಿಂದ, ಸುದುಸ್ತರೇ = ಅತ್ಯಂತವಾಗಿ ದಾಟಲಾಗದ, ಪಂಕೇ = ಕೆಸರಿನಲ್ಲಿ, ಮಗ್ನಃ = ಮುಳುಗಿದ, ವೃದ್ಧವ್ಯಾಘ್ರೇಣ = ಮುದಿಹುಲಿಯಿಂದ, ಸಂಪ್ರಾಪ್ತಃ = ಹಿಡಿಯಲ್ಪಟ್ಟ, ಸಃ ಪಥಿಕಃ = ಆ ದಾರಿಹೋಕನು, ಯಥಾ = ಹೇಗೆ, ಮೃತಃ = ಸತ್ತನೊ.

ತಾ॥ ಒಬ್ಬ ದಾರಿಹೋಕನು ಚಿನ್ನದ ಬಳೆಯಲ್ಲಿ ಆಶೆಪಟ್ಟನು. ಅದರಿಂದ ವನು ಮುದಿಹುಲಿಯ ಮಾತಿನಂತೆ ಸ್ನಾನಮಾಡಲು ಕೊಳಕ್ಕೆ ಹೋಗಿ ಅಲ್ಲಿ ಕೆಸರಿನಲ್ಲಿ ಮುಳುಗಿ ಸಿಕ್ಕಿಕೊಂಡನು. ಆಗ ಆ ಮುದಿಹುಲಿಯು ಅವನನ್ನು ಹಿಡಿದು ತಿಂದಿತು. ಹಾಗೆಯೇ ನಾವೂ ಅಕ್ಕಿಕಾಳಿನ ಆಶೆಯಿಂದ ಸಾಯುವೆವು.

೧೩. ಅ॥ ಕಪೋತಾಃ = ಪಾರಿವಾಳಗಳು, ಊಚುಃ = ಹೇಳಿದುವು. ಏತತ್ ಕಥಮ್ = ಇದು ಹೇಗೆ ? ಸಃ = ಆ ಪಾರಿವಾಳದ ದೊರೆಯು, ಅಬ್ರವೀತ್ = ಹೇಳಿತು.

ಒಂದನೆ ಕಥೆ

೧೪. ಅಹಂ = ನಾನು, ಏಕದಾ = ಒಂದಾನೊಂದು ವೇಳೆ, ದಕ್ಷಿಣಾರಣ್ಯೇ = ದಕ್ಷಿಣ ದಿಕ್ಕಿನ ಕಾಡಿನಲ್ಲಿ, ಚರನ್ = ಸಂಚರಿಸುತ್ತ, ಅಪಶ್ಯಂ = ಕಂಡೆನು.

Imp. ಕ್ಲಿಷ್ಟ ಶ್ಲೋಕ.

೧೫. अनिष्टादिष्टलाभेऽपि न गतिर्जायते शुभा ।
यत्रास्ते विषसंसर्गोऽमृतं तदपि मृत्यवे ॥१६॥ Annotation

೧೬. किन्तु सर्वत्रार्थार्जने प्रवृत्तिः सन्देह एव । तथा चोक्तम्—

---

ಏಕಃ = ಒಂದು, ವೃದ್ಧವ್ಯಾಘ್ರಃ = ಮುದಿಹುಲಿಯು, ಸ್ನಾತಃ = ಸ್ನಾನಮಾಡಿದ್ದಾಗಿ, ಕುಶಹಸ್ತಃ = ಕೈಯಲ್ಲಿ ದರ್ಭೆಯನ್ನು ಹಿಡಿದುಕೊಂಡದ್ದಾಗಿ, ಸರಸ್ತೀರೇ = ಕೆರೆಯ ದಡದಲ್ಲಿ, ಬ್ರೂತೇ = ಹೇಳುತ್ತದೆ. ಭೋ ಭೋಃ ಪಾಂಥಾಃ = ಎಲೈ ಹಾದಿಹೋಕರೆ ! ಇದಂ = ಈ, ಸುವರ್ಣಕಂಕಣಂ = ಚಿನ್ನದ ಬಳೆಯು, ಗೃಹ್ಯತಾಂ = ತೆಗೆದುಕೊಳ್ಳಲ್ಪಡಲಿ. ತತಃ = ತರುವಾಯ, ಲೋಭಾಕೃಷ್ಟೇನ = ಆಶೆಯಿಂದ ಸೆಳೆಯಲ್ಪಟ್ಟ, ಕೇನಚಿತ್ ಪಾಂಥೇನ = ಒಬ್ಬ ದಾರಿಹೋಕನಿಂದ, ಆಲೋಚಿತಂ = ಆಲೋಚಿಸಲ್ಪಟ್ಟಿತು. ಏತತ್ = ಇದು, ಭಾಗ್ಯೇನ = ಅದೃಷ್ಟದಿಂದ, ಸಂಭವತಿ = ಉಂಟಾಗುತ್ತದೆ. ಕಿಂ ತು = ಆದರೆ, ಅಸ್ಮಿನ್ = ಈ, ಆತ್ಮಸಂದೇಹೇ = ಪ್ರಾಣದ ಸಂಶಯದಲ್ಲಿ, (ಪ್ರಾಣಹಾನಿಯು ಸಂಭವಿಸೀತು ಎಂಬ ಸಂದೇಹವಿರುವುದರಿಂದ) ಪ್ರವೃತ್ತಿಃ = ಕಾರ್ಯದಲ್ಲಿ ತೊಡಗುವಿಕೆಯು, ನ ವಿಧೇಯಾ = ಮಾಡತಕ್ಕದ್ದಲ್ಲ ಯತಃ = ಯಾವ ಕಾರಣದಿಂದ,

೧೫. ಅ॥ ಅನಿಷ್ಟಾತ್ = ಕೆಟ್ಟದ್ದರಿಂದ, ಇಷ್ಟಲಾಭೇ ಅಪಿ = ಇಷ್ಟವು ದೊರೆತರೂ, ಶುಭಾ = ಮಂಗಳಕರವಾದ, ಗತಿಃ = ಸ್ಥಿತಿಯು, ನ ಜಾಯತೇ = ಉಂಟಾಗುವುದಿಲ್ಲ. ಯತ್ರ = ಯಾವುದರಲ್ಲಿ, ವಿಷಸಂಸರ್ಗಃ = ವಿಷದ ಸಂಬಂಧವು, ಆಸ್ತೇ = ಇರುವುದೊ, ತತ್ = ಅದು, ಅಮೃತಂ ಅಪಿ = ಅಮೃತವಾದರೂ, ಮೃತ್ಯವೇ = ಸಾವಿಗೋಸ್ಕರವಾಗುವುದು.

ತಾ॥ ಕೆಟ್ಟದ್ದರಿಂದ ಅಭೀಷ್ಟವು ಲಭಿಸಿದರೂ ಅದರಿಂದ ಒಳ್ಳೆಯದಾಗುವುದಿಲ್ಲ. ಅಮೃತಕ್ಕೆ ವಿಷವು ಕೂಡಿದರೆ ಅದರಿಂದ ಮರಣವೇ ಉಂಟಾಗುವುದು.

೧೬ ಅ॥ ಕಿಂ ತು = ಆದರೆ, ಸರ್ವತ್ರ = ಎಲ್ಲೆಡೆಯಲ್ಲಿಯೂ, ಅರ್ಥಾರ್ಜನೇ = ಹಣವನ್ನು ಸಂಪಾದಿಸುವುದರಲ್ಲಿ, ಪ್ರವೃತ್ತಿಃ = ತೊಡಗುವಿಕೆಯು,

೧೭. न संशयमनारुह्य नरो भद्राणि पश्यति ।
संशयं पुनरारुह्य यदि जीवति पश्यति ॥ ७ ॥

೧೮. तन्निरूपयामि तावत् ।' प्रकाशं ब्रूते 'कुत्र तव कङ्कणम् ।' व्याघ्रो हस्तं प्रसार्य दर्शयति । पान्थोऽवदत् 'कथं मारात्मके त्वयि विश्वासः' । व्याघ्र उवाच 'शृणु रे पान्थ प्रागेव यौवनदशायामतिदुर्वृत्त आसम् । अनेकगोमानुषाणां वधान्मे पुत्रा मृता दाराश्च । वंशहीनश्चाहम् । ततः केनचिद्धार्मिकेणाहमादिष्टः —

---

ಸಂದೇಹಃ ಏವ=ಸಂಶಯದಿಂದ ಕೂಡಿರುವುದೇ ಆಗಿರುವುದು. ತಥಾ ಚ= ಹಾಗೆಯೇ, ಉಕ್ತಂ=ಹೇಳಲ್ಪಟ್ಟಿದೆ.

೧೭. ಅ॥ ನರಃ=ಮನುಷ್ಯನು, ಸಂಶಯಂ=ಸಂದೇಹವನ್ನು, ಅನಾರುಹ್ಯ =ಆಶ್ರಯಿಸದೆ, ಭದ್ರಾಣಿ=ಮಂಗಳಗಳನ್ನು, ನ ಪಶ್ಯತಿ=ನೋಡುವುದಿಲ್ಲ. ಸಂಶಯಂ=ಸಂದೇಹವನ್ನು, ಆರುಹ್ಯ=ಆಶ್ರಯಿಸಿ, ಪುನಃ=ಮತ್ತೆ, ಯದಿ ಜೀವತಿ=ಬದುಕಿದ್ದೇ ಆದರೆ, ಪಶ್ಯತಿ=ಮಂಗಳವನ್ನು ನೋಡುತ್ತಾನೆ.

ತಾ॥ ಎಲ್ಲಾ ಕಾರ್ಯಗಳಲ್ಲಿಯೂ ಸಂದೇಹವು ಒದಗುವುದು. ಹಾಗೆ ಸಂದೇಹವಿಲ್ಲದೆ ಮನುಷ್ಯನು ಮಂಗಳವನ್ನು ಪಡೆಯಲಾರನು. ಸಂಶಯ ಬಂದಾಗ ಅದನ್ನು ಲೆಕ್ಕಿಸದೆ ಕಾರ್ಯದಲ್ಲಿ ತೊಡಗಿದರೆ ಏನೂ ವಿಪತ್ತು ಒದಗದಿದ್ದರೆ ಅವಶ್ಯವಾಗಿ ಮಂಗಳವನ್ನು ಪಡೆಯುವನು.

೧೮. ಅ॥ ತತ್=ಆದ್ದರಿಂದ, ನಿರೂಪಯಾಮಿ ತಾವತ್=ಮೊದಲು ವಿಚಾರಮಾಡುತ್ತೇನೆ. ಪ್ರಕಾಶಂ=ಎಲ್ಲರಿಗೂ ಕೇಳುವಂತೆ ಘಟ್ಟಿಯಾಗಿ, ಬ್ರೂತೇ=ಹೇಳುತ್ತಾನೆ. ತವ=ನಿನ್ನ, ಕಂಕಣಂ=ಬಳೆಯು, ಕುತ್ರ= ಎಲ್ಲಿದೆ. ವ್ಯಾಘ್ರಃ=ಹುಲಿಯು, ಹಸ್ತಂ=ಕೈಯನ್ನು, ಪ್ರಸಾರ್ಯ=ಚಾಚಿ, ದರ್ಶಯತಿ=ತೋರಿಸುತ್ತದೆ. ಪಾಂಥಃ=ದಾರಿಗನು, ಅವದತ್=ಹೇಳಿದನು. ಮಾರಾತ್ಮಕೇ=ಕೊಲ್ಲುವ ಸ್ವಭಾವವುಳ್ಳ, ತ್ವಯಿ=ನಿನ್ನಲ್ಲಿ, ವಿಶ್ವಾಸಃ= ನಂಬಿಕೆಯು, ಕಥಂ=ಹೇಗುಂಟಾಗುವುದು ? ವ್ಯಾಘ್ರಃ ಉವಾಚ=ಹುಲಿಯು

'दानधर्मादिकं चरतु भवान् ।' तदुपदेशादिदानीमहं स्नानशीलो दाता वृद्धो गलितनखदन्तो न कथं विश्वासभूमिः । यतः ।

೧೯. इज्याध्ययनदानानि तपः सत्यं धृतिः क्षमा ।
अलोभ इति मार्गोऽयं धर्मस्याष्टविधः स्मृतः ॥ ८ ॥

---

ಹೇಳಿತು. ರೇ ಪಾಂಥ=ಎಲೈ ದಾರಿಗನೆ! ಶೃಣು=ಕೇಳು. ಪ್ರಾಗೇವ=ಮೊದಲೇ, ಯೌವನದಶಾಯಾಂ=ತಾರುಣ್ಯದಲ್ಲಿ, ಅತಿದುರ್ವೃತ್ತಃ=ಅತ್ಯಂತ ಕೆಟ್ಟನಡತೆಯುಳ್ಳವನು, ಆಸಂ=ಆಗಿದ್ದೆನು. ಅನೇಕ=ಬಹಳ, ಗೋ=ಹಸುಗಳು, ಮಾನುಷಾಣಾಂ=ಮನುಷ್ಯರು ಇವರ, ವಧಾತ್=ಕೊಲ್ಲುವಿಕೆಯಿಂದ, ಮೇ=ನನ್ನ, ಪುತ್ರಾಃ=ಮಕ್ಕಳು, ಚ=ಮತ್ತು, ದಾರಾಃ=ಹೆಂಡತಿಯು, ಮೃತಾಃ=ಸತ್ತರು. ಅಹಂ=ನಾನು, ವಂಶಹೀನಃ ಚ=ಸಂತತಿಯಿಲ್ಲದವನೂ ಆಗಿದ್ದೇನೆ. ತತಃ=ಬಳಿಕ; ಕೇನಚಿತ್=ಯಾವನೊ ಒಬ್ಬ, ಧಾರ್ಮಿಕೇಣ=ಧರ್ಮವನ್ನು ತಿಳಿಹೇಳುವವನಿಂದ, ಅಹಂ=ನಾನು, ಭವಾನ್=ನೀನು, ದಾನಧರ್ಮಾದಿಕಂ=ದಾನಧರ್ಮ ಮೊದಲಾದುವುಗಳನ್ನು, ಚರತು=ಮಾಡು ಎಂದು, ಆದಿಷ್ಟಃ=ಉಪದೇಶಮಾಡಲ್ಪಟ್ಟೆನು, ತತ್=ಅವನ, ಉಪದೇಶಾತ್=ಬುದ್ಧಿವಾದದಿಂದ, ಇದಾನೀಂ=ಈಗ, ಸ್ನಾನಶೀಲಃ=ಸ್ನಾನ ಮಾಡುವ ಸ್ವಭಾವ ಉಳ್ಳವನೂ, ದಾತಾ=ದಾನ ಮಾಡುವವನೂ,' ವೃದ್ಧಃ=ಮುದುಕನೂ, ಗಲಿತ=ಉದುರಿದ, ನಖ=ಉಗುರು, ದಂತಃ=ಹಲ್ಲು ಇವುಗಳುಳ್ಳವನೂ ಆದ, ಅಹಂ=ನಾನು, ಕಥಂ=ಹೇಗೆ, ವಿಶ್ವಾಸಭೂಮಿಃ=ನಂಬಿಕೆಗೆ ವಿಷಯನು, ನ=ಅಲ್ಲ, ಯತಃ=ಯಾವ ಕಾರಣದಿಂದ.

೧೯. ಅ॥ ಇಜ್ಯಾ=ಯಾಗ, ಅಧ್ಯಯನ=ವೇದವನ್ನು ಓದುವುದು, ದಾನಾನಿ=ದಾನಗಳು, ತಪಃ=ತಪಸ್ಸು, ಸತ್ಯಂ=ಸತ್ಯವನ್ನು ಹೇಳುವುದು, ಧೃತಿಃ=ಧೈರ್ಯ, ಕ್ಷಮಾ=ಸಹನೆ, ಅಲೋಭಃ=ಆಶೆಯಿಲ್ಲದಿರುವುದು, ಇತಿ=ಹೀಗೆಂದು, ಅಯಂ=ಈ, ಧರ್ಮಸ್ಯ=ಧರ್ಮದ, ಅಷ್ಟವಿಧಃ=ಎಂಟು

೧೦. तत्र पूर्वश्चतुर्वर्गो दम्भार्थमपि सेव्यते ।
उत्तरस्तु चतुर्वर्गो महात्मन्येव तिष्ठति ॥ ९ ॥

೧೧. मम चैतावांल्लोभविरहो येन स्वहस्तस्थमपि सुवर्णकङ्कणं यस्मै कस्मैचिद्दातुमिच्छामि । तथापि व्याघ्रो मानुषं खादतीति लोकप्रवादो दुर्निवारः । यतः ।

---

ಪ್ರಕಾರವಾದ, ಮಾರ್ಗಃ=ದಾರಿಯು, ಸ್ಮೃತಃ=ಚಿಂತಿಸಲ್ಪಟ್ಟದೆ (ಸ್ಮೃತಿ ಗ್ರಂಥಗಳಲ್ಲಿ ಹೇಳಲ್ಪಟ್ಟದೆ).

ತಾ॥ ಯಾಗ ಮಾಡುವುದು, ವೇದವನ್ನು ಓದುವುದು, ದಾನಮಾಡುವುದು, ತಪಸ್ಸು ಮಾಡುವುದು, ಸತ್ಯವನ್ನು ನುಡಿಯುವುದು, ಧೈರ್ಯ, ಸಹನೆಯಿಂದಿರುವುದು ಇವು ಎಂಟು ಧರ್ಮದ ಮಾರ್ಗಗಳೆಂದು ಸ್ಮೃತಿಗ್ರಂಥಗಳಲ್ಲಿ ಹೇಳಲ್ಪಟ್ಟದೆ.

೧೦. ಅ॥ ತತ್ರ=ಅವುಗಳಲ್ಲಿ, ಪೂರ್ವಃ=ಮೊದಲಿನ, ಚತುರ್ವರ್ಗಃ=ನಾಲ್ಕರ ಗುಂಪು, ದಂಭಾರ್ಥಂ ಅಪಿ=ಕಪಟಕ್ಕಾಗಿಯೂ, ಸೇವ್ಯತೇ=ಸೇವಿಸಲ್ಪಡುತ್ತದೆ, ಉತ್ತರಃ ಚತುರ್ವರ್ಗಃ ತು=ಮುಂದಿನ ನಾಲ್ಕರ ಗುಂಪು, ಮಹಾತ್ಮನಿ ಏವ=ಮಹಾತ್ಮನಲ್ಲಿಯೇ, ತಿಷ್ಠತಿ=ಇರುವುದು.

ತಾ॥ ಈ ಧರ್ಮದ ಎಂಟು ಮಾರ್ಗಗಳಲ್ಲಿ ಮೊದಲನೆಯ ಯಾಗ, ಅಧ್ಯಯನ, ದಾನ, ತಪಸ್ಸು ಇವುಗಳನ್ನು ಕೆಲವರು ಇನ್ನೊಬ್ಬರನ್ನು ಮೋಸ ಮಾಡುವುದಕ್ಕಾಗಿಯೂ ಆಚರಿಸುತ್ತಾರೆ. ಉಳಿದ ಸತ್ಯ, ಧೈರ್ಯ, ಸಹನೆ, ಆಶೆಯಿಲ್ಲದಿರುವುದು ಇವುಗಳು ಉತ್ತಮರಲ್ಲಿಯೇ ಇರುವುವು.

೧೧. ಅ॥ ಮಮ ಚ=ನನಗೂ, ಲೋಭವಿರಹಃ=ಆಶೆಯಿಲ್ಲದಿರುವಿಕೆಯು, ಏತಾವಾನ್=ಇಷ್ಟು. ಯೇನ=ಯಾವುದರಿಂದ, ಸ್ವಹಸ್ತಸ್ಥಂ=ನನ್ನ ಕೈಯಲ್ಲಿರುವ, ಸುವರ್ಣಕಂಕಣಂ=ಚಿನ್ನದ ಬಳೆಯನ್ನು, ಯಸ್ಮೈ ಕಸ್ಮೈಚಿತ್=ಯಾವನಿಗಾದರೂ, ದಾತುಂ=ಕೊಡುವುದಕ್ಕೆ, ಇಚ್ಛಾಮಿ=

Tu. Annotation

೨೨. गतानुगतिको लोकः कुट्टनीमुपदेशिनीम् ।
प्रमाणयति नो धर्मे यथा गोघ्नमपि द्विजम् ॥ १० ॥

೨೩. मया च धर्मशास्त्राण्यधीतानि । शृणु—

೨೪. मरुस्थल्यां यथा वृष्टिः क्षुधार्ते भोजनं तथा ।
दरिद्रे दीयते दानं सफलं पाण्डुनन्दन ॥ ११ ॥

Annotation

---

ಅಪೇಕ್ಷಿಸುತ್ತೇನೆ. ತಥಾ ಅಪಿ=ಹಾಗಾದರೂ, ವ್ಯಾಘ್ರಃ=ಹುಲಿಯು, ಮಾನುಷಂ=ಮನುಷ್ಯನನ್ನು, ಖಾದತೀತಿ=ತಿನ್ನುತ್ತದೆ ಎಂಬ, ಲೋಕ-ಪ್ರವಾದಃ=ಜನಗಳ ಅಪವಾದವು, ದುರ್ನಿವಾರಃ=ತಡೆಯಲಾಗದುದು. ಯತಃ=ಯಾವ ಕಾರಣದಿಂದ,

೨೨. ಅ॥ ಲೋಕಃ=ಜನರು, ಗತಾನುಗತಿಕಃ=ಮತ್ತೊಬ್ಬರನ್ನು ಅನುಸರಿಸಿ ಹೋಗತಕ್ಕವರು. ದ್ವಿಜಂ=ಬ್ರಾಹ್ಮಣನನ್ನು, ಗೋಘ್ನಂ ಅಪಿ=ಹಸುವನ್ನು ಕೊಲ್ಲುವವನನ್ನಾದರೂ, ಯಥಾ=ಹೇಗೆ, ಧರ್ಮೇ=ಧರ್ಮವಿಷಯದಲ್ಲಿ, ಪ್ರಮಾಣಯತಿ=ಆಧಾರವಾಗಿ ತೆಗೆದುಕೊಳ್ಳುವರೊ, (ಹಾಗೆ) ಉಪದೇಶಿನೀಂ=ಒಳ್ಳೆದನ್ನು ತಿಳಿಹೇಳುವ, ಕುಟ್ಟನೀಂ=ತಲೆಹಿಡಿಕಿಯನ್ನು, ನೋ=ಆಧಾರವಾಗಿ ತೆಗೆದುಕೊಳ್ಳುವುದಿಲ್ಲ.

ತಾ॥ ಲೋಕದಲ್ಲಿ ಜನರು ಒಬ್ಬರು ಮಾಡಿದಂತೆ ಮತ್ತೊಬ್ಬರು ಮಾಡತಕ್ಕವರು. ತಾವು ಸ್ವಂತವಾಗಿ ಆಲೋಚಿಸುವುದಿಲ್ಲ. ಬ್ರಾಹ್ಮಣನು ಗೋಹತ್ಯೆ ಮಾಡಿದ್ದರೂ ಅವನು ಬ್ರಾಹ್ಮಣನಾದ್ದರಿಂದ ಅವನ ಮಾತನ್ನು ನಂಬುವರು. ತಲೆಹಿಡಿಕಿಯು ಒಳ್ಳೆದನ್ನು ಉಪದೇಶ ಮಾಡಿದರೂ ಅವಳು ಕೆಟ್ಟವಳೆಂದು ಅವಳ ಮಾತನ್ನು ಗೌರವಿಸುವುದಿಲ್ಲ

೨೩. ಅ॥ ಮಯಾ ಚ=ನನ್ನಿಂದಲೂ, ಧರ್ಮಶಾಸ್ತ್ರಾಣಿ=ಧರ್ಮಶಾಸ್ತ್ರಗಳು, ಅಧೀತಾನಿ=ಓದಲ್ಪಟ್ಟವೆ. ಶೃಣು=ಕೇಳು.

೨೪. ಅ॥ ಪಾಂಡುನಂದನ=ಪಾಂಡುರಾಜನ ಮಗನಾದ ಧರ್ಮರಾಜನೆ! ಮರುಸ್ಥಲ್ಯಾಂ=ಮರುಭೂಮಿಯಲ್ಲಿ, ವೃಷ್ಟಿಃ=ಮಳೆಯು, ಯಥಾ

೨೫. प्राणा यथात्मनोऽभीष्टा भूतानामपि ते तथा ।
आत्मौपम्येन भूतेषु दयां कुर्वन्ति साधवः ॥ १२ ॥

೨೬. अपरं च ।
प्रत्याख्याने च दाने च सुखदुःखे प्रियाप्रिये ।
आत्मौपम्येन पुरुषः प्रमाणमधिगच्छति ॥ १३ ॥

---

=ಹೇಗೋ, ಕ್ಷುಧಾರ್ತೇ=ಹಸಿವಿನಿಂದ ಪೀಡಿಸಲ್ಪಟ್ಟವನಲ್ಲಿ, ಭೋಜನಂ ಯಥಾ=ಊಟವು ಹೇಗೋ, ತಥಾ=ಹಾಗೆ, ದರಿದ್ರೇ=ಬಡವನಲ್ಲಿ, ದಾನಂ =ದಾನವು, ದೀಯತೇ=ಕೊಡಲ್ಪಟ್ಟದ್ದೇ ಆದರೆ; ಸಫಲಂ=ಸಾರ್ಥಕವಾಗುವುದು.

ತಾ॥ ಧರ್ಮರಾಜ ! ಬಡವನಿಗೆ ದಾನವನ್ನು ಕೊಡಬೇಕು. ಅದು ನೀರಿಲ್ಲದ ನೆಲದ ಮೇಲೆ ಮಳೆ ಸುರಿದಂತೆಯೂ, ಹಸಿವುಗೊಂಡವನಿಗೆ ಅನ್ನನೀಡಿದಂತೆಯೂ ಸಾರ್ಥಕವಾಗುವುದು.

೨೫. ಅ॥ ಆತ್ಮನಃ=ತನ್ನ, ಪ್ರಾಣಾಃ=ಪ್ರಾಣವು, ಯಥಾ=ಹೇಗೆ, ಅಭೀಷ್ಟಾಃ=ಇಷ್ಟವಾದುದೊ, ಭೂತಾನಾಂ=ಇತರ ಪ್ರಾಣಿಗಳ, ತೇ= ಆ ಪ್ರಾಣವು, ತಥಾ=ಹಾಗೆಯೇ. ಸಾಧವಃ=ಸಜ್ಜನರು, ಭೂತೇಷು= ಪ್ರಾಣಿಗಳಲ್ಲಿ, ಆತ್ಮೌಪಮ್ಯೇನ=ತಮ್ಮ ಸಾಮ್ಯದಿಂದ, ದಯಾಂ=ಕರುಣೆಯನ್ನು, ಕುರ್ವಂತಿ=ಮಾಡುತ್ತಾರೆ.

ತಾ॥ ಮನುಷ್ಯನಿಗೆ ತನ್ನ ಪ್ರಾಣದಲ್ಲಿ ಎಷ್ಟು ಮಮತೆಯಿರುವುದೊ, ಪಶುಪಕ್ಷಿಗಳಿಗೂ ಹಾಗೆಯೇ ತಮ್ಮ ಪ್ರಾಣದಲ್ಲಿ ಪ್ರೀತಿಯಿರುವುದು. ಆದ್ದರಿಂದ ಸಜ್ಜನರು ತಮ್ಮಂತೆಯೇ ಪ್ರಾಣಿಗಳೆಂದು ತಿಳಿದು ಅವುಗಳಲ್ಲಿ ದಯೆ ಮಾಡುವರು.

೨೬. ಅ॥ ಅಪರಂ ಚ=ಮತ್ತೂ, ಪುರುಷಃ=ಮನುಷ್ಯನು, ಪ್ರತ್ಯಾಖ್ಯಾನೇ ಚ=ತಿರಸ್ಕಾರ ವಿಷಯದಲ್ಲಿಯೂ, ದಾನೇ ಚ=ಕೊಡುವ ವಿಷಯದಲ್ಲಿಯೂ, ಸುಖದುಃಖೇ=ಕಷ್ಟಸುಖಗಳಲ್ಲಿಯೂ, ಪ್ರಿಯಾಪ್ರಿಯೇ=

೨೭. अन्यच्च ।

मातृवत्परदारेषु परद्रव्येषु लोष्टवत् ।
आत्मवत्सर्वभूतेषु यः पश्यति स पण्डितः ॥ १४ ॥

೨೮. त्वं चातीव दुर्गतस्तेन तत्तुभ्यं दातुं सयत्नोऽहम् । तथा चोक्तम्-

---

ಇಷ್ಟಾನಿಷ್ಟಗಳಲ್ಲಿಯೂ, ಆತ್ಮೌಪಮ್ಯೇನ=ತನ್ನ ಸಾದೃಶ್ಯದಿಂದ, ಪ್ರಮಾಣಂ ಅಧಿಗಚ್ಛತಿ=ನಿರ್ಧಾರವನ್ನು ಹೊಂದುತ್ತಾನೆ.

ತಾ॥ ಮಾನವನು ಮತ್ತೊಬ್ಬರನ್ನು ತಿರಸ್ಕಾರ ಮಾಡುವುದರಲ್ಲಿಯೂ, ಕೊಡುವುದರಲ್ಲಿಯೂ, ಕಷ್ಟಸುಖಗಳ ಅನುಭವದಲ್ಲಿಯೂ, ಇಷ್ಟಾನಿಷ್ಟಗಳು ಒದಗಿದಲ್ಲಿಯೂ ತನ್ನ ದೃಷ್ಟಾಂತದಿಂದ ಇನ್ನೊಬ್ಬರ ವಿಷಯದಲ್ಲಿ ನಿರ್ಣಯವನ್ನು ಹೊಂದುತ್ತಾನೆ.

೨೭. ಅ॥ ಅನ್ಯಚ್ಚ=ಮತ್ತೂ, ಯಃ=ಯಾವನು, ಪರದಾರೇಷು=ಇನ್ನೊಬ್ಬರ ಹೆಂಡತಿಯರಲ್ಲಿ, ಮಾತೃವತ್=ತಾಯಿಯಂತೆಯೂ, ಪರದ್ರವ್ಯೇಷು=ಇನ್ನೊಬ್ಬರ ವಸ್ತುಗಳಲ್ಲಿ, ಲೋಷ್ಟವತ್=ಮಣ್ಣಿನ ಹೆಂಟೆ (ಉಂಡೆ) ಯಂತೆಯೂ, ಸರ್ವಭೂತೇಷು=ಎಲ್ಲಾ ಪ್ರಾಣಿಗಳಲ್ಲಿ, ಆತ್ಮವತ್=ತನ್ನಂತೆಯೂ, ಪಶ್ಯತಿ=ನೋಡುವನೊ; ಸಃ=ಅವನು, ಪಂಡಿತಃ=ವಿದ್ವಾಂಸನು.

ತಾ॥ ಪರರ ಹೆಂಡತಿಯರನ್ನು ತನ್ನ ತಾಯಿಯಂತೆಯೂ, ಇನ್ನೊಬ್ಬರ ಪದಾರ್ಥಗಳನ್ನು ಮಣ್ಣಿನ ಹೆಂಟೆಯಂತೆಯೂ, ಎಲ್ಲ ಪ್ರಾಣಿಗಳನ್ನು ತನ್ನಂತೆಯೂ ನೋಡುವ ಮನುಷ್ಯನು ಜ್ಞಾನಿಯೆನ್ನಿಸಿಕೊಳ್ಳುವನು.

೨೮. ಅ॥ ತ್ವಂ ಚ=ನೀನೂ, ಅತೀವ=ಬಹಳ, ದುರ್ಗತಃ=ಬಡವನು. ತೇನ=ಅದರಿಂದ, ತತ್=ಆ ಬಳೆಯನ್ನು, ತುಭ್ಯಂ=ನಿನಗೆ, ದಾತುಂ=ಕೊಡುವುದಕ್ಕೆ, ಅಹಂ=ನಾನು, ಸಯತ್ನಃ=ಪ್ರಯತ್ನದಿಂದ ಕೂಡಿದವನು. ತಥಾ ಚ=ಹಾಗೆಯೇ, ಉಕ್ತಂ=ಹೇಳಲ್ಪಟ್ಟಿದೆ.

Annotation.

೨೯. दरिद्रान्भर कौन्तेय मा प्रयच्छेश्वरे धनम् ।
व्याधितस्यौषधं पथ्यं नीरुजस्य किमौषधैः ॥ १५ ॥

೩೦. अन्यच्च ।

दातव्यमिति यद्दानं दीयतेऽनुपकारिणे ।
देशे काले च पात्रे च तद्दानं सात्त्विकं विदुः ॥ १६ ॥

---

೨೯. ಅ॥ ಕೌಂತೇಯ=ಕುಂತಿಯ ಮಗನಾದ ಧರ್ಮರಾಜನೆ! ದರಿದ್ರಾನ್=ಬಡವರನ್ನು, ಭರ=ಪೋಷಿಸು. ಈಶ್ವರೇ=ಹಣಗಾರನಲ್ಲಿ, ಧನಂ=ಹಣವನ್ನು, ಮಾ ಪ್ರಯಚ್ಛ=ಕೊಡಬೇಡ. ವ್ಯಾಧಿತಸ್ಯ=ಕಾಯಿಲೆಗೊಂಡವನಿಗೆ, ಔಷಧಂ=ಔಷಧವು, ಪಥ್ಯಂ=ಹಿತವಾಗುವುದು. ನೀರುಜಸ್ಯ=ಕಾಯಿಲೆಯಿಲ್ಲದವನಿಗೆ, ಔಷಧೈಃ=ಔಷಧಗಳಿಂದ, ಕಿಂ=ಏನು ಪ್ರಯೋಜನ ?

ತಾ॥ ಧರ್ಮರಾಜ ಬಡವರನ್ನು ಕಾಪಾಡು. ಹಾಗೆ ಮಾಡಿದಲ್ಲಿ ಅದು ಕಾಯಿಲೆಯುವನಿಗೆ ಔಷಧವು ಹಿತವಾಗುವಂತೆ ಬಡವನಿಗೆ ಹಿತವಾಗುವುದು. ಐಶ್ವರ್ಯವಂತನಿಗೆ ಹಣವನ್ನೀಯಬೇಡ. ಹಾಗೆ ಅವನಿಗೆ ಹಣವನ್ನು ಕೊಟ್ಟಲ್ಲಿ ಅದು ಕಾಯಿಲೆಯಿಲ್ಲದವನಿಗೆ ಔಷಧವು ರುಚಿಸದಂತೆ ಪ್ರಯೋಜನವಾಗುವುದಿಲ್ಲ.

೩೦. ಅ॥ ಅನ್ಯಚ್ಚ=ಮತ್ತೂ, ದಾತವ್ಯಂ ಇತಿ=ಕೊಡತಕ್ಕದ್ದೆಂದಿರುವ ಯತ್=ಯಾವ, ದಾನಂ=ದಾನವು, ಅನುಪಕಾರಿಣೇ=ಉಪಕಾರಮಾಡದವನಿಗೆ, ದೀಯತೇ=ಕೊಡಲ್ಪಡುವುದೊ, ದೇಶೇ=ಒಳ್ಳೆ ಸ್ಥಳದಲ್ಲಿ, ಕಾಲೇ ಚ=ಸಮಯದಲ್ಲಿ, ಪಾತ್ರೇ ಚ=ಯೋಗ್ಯತೆಯುಳ್ಳವನಲ್ಲಿ ಕೊಟ್ಟ, ತದ್ದಾನಂ=ಆ ದಾನವನ್ನು, ಸಾತ್ವಿಕಂ=ಸಾತ್ವಿಕವನ್ನಾಗಿ, ವಿದುಃ=ತಿಳಿಯುತ್ತಾರೆ.

ತಾ॥ ನಾವು ಕೊಡುವ ದಾನವನ್ನು ಪ್ರತ್ಯುಪಕಾರವನ್ನು ಬಯಸದೆ ಒಳ್ಳೆ ಸ್ಥಳ, ಸರಿಯಾದ ಕಾಲ, ಯೋಗ್ಯನಾದ ಮನುಷ್ಯ ಇದನ್ನರಿತು ಕೊಟ್ಟಲ್ಲಿ ಅದು ಸಾತ್ತ್ವಿಕ, ರಾಜಸ, ತಾಮಸವೆಂಬ ಮೂರು ವಿಧ ದಾನಗಳಲ್ಲಿ ಸಾತ್ತ್ವಿಕದಾನವಾಗುವುದು.

೩೧. तदत्र सरसि स्नात्वा सुवर्णकङ्कणं गृहाण' । ततो यावदसौ तद्वचः प्रतीतो लोभात्सरः स्नातुं प्रविशति तावन्महापङ्के निमग्नः पलायितुमक्षमः । पङ्के पतितं दृष्ट्वा व्याघ्रोऽवदत्—'अहह, महापङ्के पतितोऽसि । अतस्त्वामहमुत्थापयामि ।' इत्युक्त्वा शनैः शनैरुपगम्य तेन व्याघ्रेण धृतः स पान्थः अचिन्तयत्–

೩೨. न धर्मशास्त्रं पठतीति कारणं
न चापि वेदाध्ययनं दुरात्मनः ।

---

೩೧. ಅ॥ ತತ್=ಆದ್ದರಿಂದ, ಅತ್ರ ಸರಸಿ=ಈ ಸರೋವರದಲ್ಲಿ, ಸ್ನಾತ್ವಾ=ಮಿಂದು, ಸುವರ್ಣಕಂಕಣಂ=ಚಿನ್ನದ ಬಳೆಯನ್ನು, ಗೃಹಾಣ =ತೆಗೆದುಕೊ.' ತತಃ=ಬಳಿಕ, ಯಾವತ್=ಎಷ್ಟರಲ್ಲಿ, ಅಸೌ=ಇವನು, ತತ್=ಆ ಹುಲಿಯ, ವಚಃ=ಮಾತನ್ನು, ಪ್ರತೀತಃ=ನಂಬಿದವನಾಗಿ, ಲೋಭಾತ್=ಅತ್ಯಾಶೆಯಿಂದ, ಸ್ನಾತುಂ=ಸ್ನಾನಮಾಡಲು, ಸರಃ=ಕೆರೆಯನ್ನು, ಪ್ರವಿಶತಿ=ಪ್ರವೇಶಮಾಡುತ್ತಾನೊ. ತಾವತ್=ಅಷ್ಟರಲ್ಲಿ, ಮಹಾಪಂಕೇ=ಹೆಚ್ಚಾದ ಕೆಸರಿನಲ್ಲಿ, ನಿಮಗ್ನಃ=ಮುಳುಗಿದವನಾಗಿ, ಪಲಾಯಿತುಂ=ಓಡಲು, ಅಕ್ಷಮಃ=ಶಕ್ತಿಯಿಲ್ಲದವನಾದನು. ಪಂಕೇ=ಕೆಸರಿನಲ್ಲಿ, ಪತಿತಂ=ಬಿದ್ದ ಅವನನ್ನು, ದೃಷ್ಟ್ವಾ=ನೋಡಿ, ವ್ಯಾಘ್ರಃ=ಹುಲಿಯು, ಅವದತ್=ಹೇಳಿತು. ಅಹಹ=ಅಯ್ಯೋ! ಮಹಾಪಂಕೇ=ಹೆಚ್ಚಾದ ಕೆಸರಿನಲ್ಲಿ, ಪತಿತಃ=ಬಿದ್ದವನು, ಅಸಿ=ಆಗಿದ್ದೀ. ಅತಃ=ಈ ಕಾರಣದಿಂದ, ಅಹಂ=ನಾನು, ತ್ವಾಂ=ನಿನ್ನನ್ನು, ಉತ್ಥಾಪಯಾಮಿ=ಎತ್ತುತ್ತೇನೆ. ಇತ್ಯುಕ್ತ್ವಾ=ಹೀಗೆ ಹೇಳಿ, ಶನೈಃ ಶನೈಃ=ಮೆಲ್ಲಮೆಲ್ಲನೆ, ಉಪಗಮ್ಯ=ಸಮೀಪಿಸಿ, ತೇನ ವ್ಯಾಘ್ರೇಣ=ಆ ಹುಲಿಯಿಂದ, ಧೃತಃ=ಹಿಡಿಯಲ್ಪಟ್ಟ, ಸಃ ಪಾಂಥಃ=ಆ ದಾರಿಹೋಕನು, ಅಚಿಂತಯತ್=ಆಲೋಚಿಸಿದನು.

೩೨. ಅ॥ ದುರಾತ್ಮನಃ=ದುಷ್ಟನಿಗೆ, ಧರ್ಮಶಾಸ್ತ್ರಂ=ಧರ್ಮವನ್ನು ಬೋಧಿಸುವ ಶಾಸ್ತ್ರವನ್ನು, ಪಠತೀತಿ=ಓದುತ್ತಾನೆಂದು, ಕಾರಣಂ=ಕಾರ

स्वभाव एवात्र तथातिरिच्यते
यथा प्रकृत्या मधुरं गवां पयः ॥ १७ ॥

೨೨. किञ्च ।

अवशेन्द्रियचित्तानां हस्तिस्नानमिव क्रिया ।
दुर्भगाभरणप्रायो ज्ञानं भारः क्रियां विना ॥ १८ ॥

---

ಣವು, ನ=ಆಗುವುದಿಲ್ಲ. ವೇದಾಧ್ಯಯನಂ ಚ=ವೇದವನ್ನು ಓದುವುದೂ, ನ=ಕಾರಣ ಆಗುವುದಿಲ್ಲ. ಗವಾಂ=ಹಸುಗಳ, ಪಯಃ=ಹಾಲು, ಯಥಾ=ಹೇಗೆ, ಪ್ರಕೃತ್ಯಾ=ಸ್ವಭಾವದಿಂದ, ಮಧುರಃ=ಸಿಹಿಯಾದುದೊ, ತಥಾ=ಹಾಗೆಯೇ, ಅತ್ರ=ಈ ಲೋಕದಲ್ಲಿ, ಸ್ವಭಾವಃ ಏವ=ಸ್ವಭಾವವೇ, ಅತಿರಿಚ್ಯತೇ=ಹೆಚ್ಚಾಗುತ್ತದೆ.

ತಾ॥ ದುಷ್ಟನು ಧರ್ಮಶಾಸ್ತ್ರವನ್ನು ಓದಿದರೂ, ವೇದಗಳನ್ನು ಅಧ್ಯಯನ ಮಾಡಿದರೂ ಅವನಿಗೆ ಒಳ್ಳೆ ಸ್ವಭಾವವುಂಟಾಗುವುದಿಲ್ಲ. ಹಸುವಿನ ಹಾಲು ಹೇಗೆ ಸ್ವಭಾವದಿಂದಲೇ ಸಿಹಿಯಾಗಿರುವುದೋ ಹಾಗೆಯೇ ಅವನ ದುಷ್ಟ ಸ್ವಭಾವವೇ ಎಲ್ಲವನ್ನೂ ಮೀರಿಸಿ ನಿಲ್ಲುವುದು.

೨೨. ಅ॥ ಕಿಂಚ=ಮತ್ತು. ಅವಶ=ಸ್ವಾಧೀನವಲ್ಲದ, ಇಂದ್ರಿಯ=ಇಂದ್ರಿಯಗಳು, ಚಿತ್ತಾನಾಂ=ಮನಸ್ಸು ಇವುಗಳುಳ್ಳವರಿಗೆ, ಕ್ರಿಯಾ=ಉಪದೇಶ ಮೊದಲಾದ ಕ್ರಿಯೆಯು, ಹಸ್ತಿಸ್ನಾನಂ ಇವ=ಆನೆಯ ಸ್ನಾನದಂತೆ, ಕ್ರಿಯಾಂ ವಿನಾ=ಅನುಷ್ಠಾನವಿಲ್ಲದೆ, ಜ್ಞಾನಂ=ತಿಳುವಳಿಕೆಯು, ದುರ್ಭಗಾ=ಕುರೂಪಿಣಿಯ, ಆಭರಣಪ್ರಾಯಃ=ಒಡವೆಗಳಂತೆ, ಭಾರಃ=ಭಾರವು.

ತಾ॥ ಆನೆಯು ಹೊಳೆ ಕೆರೆ ಮೊದಲಾದುವುಗಳಲ್ಲಿ ಮುಳುಗಿ ಸ್ನಾನಮಾಡುವುದು. ಆದರೆ ಆ ಸ್ನಾನದಿಂದ ಅದರ ಮೈಕೊಳೆಯು ಹೋಗುವುದಿಲ್ಲ. ಹಾಗೆಯೇ ಇಂದ್ರಿಯ ನಿಗ್ರಹ ಮತ್ತು ಮನಸ್ಸಿನ ಸ್ಥೈರ್ಯವಿಲ್ಲದವರಿಗೆ ಯಾವ ಉಪದೇಶ ಮಾಡಿದರೂ ಪ್ರಯೋಜನವಾಗುವುದಿಲ್ಲ. ಜ್ಞಾನಿಯಾಗಿದ್ದರೂ

೩೪. तन्मया भद्रं न कृतं यदत्र मारात्मके विश्वासः कृतः । तथा ह्युक्तम्—

೩೫. नदीनां शस्त्रपाणीनां नखिनां शृङ्गिणां तथा ।
विश्वासो नैव कर्तव्यः स्त्रीषु राजकुलेषु च ॥ १९ ॥

---

ಅದರಂತೆ ಅನುಷ್ಠಾನ ಮಾಡದವನ ಜ್ಞಾನವು ಸೌಂದರ್ಯವಿಲ್ಲದ ಕುರೂಪಿಣಿಗೆ ಒಡವೆಗಳನ್ನು ಹಾಕಿಕೊಂಡರೆ ಸುಮ್ಮನೆ ಭಾರವಾಗಿ ಪ್ರಯೋಜನವಾಗದಿರುವಂತೆ ಒಂದು ಹೊರೆಯಾಗುವುದು.

೩೪. ಅ॥ ಮಯಾ = ನನ್ನಿಂದ, ಯತ್ = ಯಾವ ಕಾರಣದಿಂದ, ಮಾರಾತ್ಮಕೇ = ಕೊಲ್ಲುವ ಸ್ವಭಾವವುಳ್ಳ, ಅತ್ರ = ಈ ಹುಲಿಯಲ್ಲಿ, ವಿಶ್ವಾಸಃ = ನಂಬಿಕೆಯು, ಕೃತಃ = ಮಾಡಲ್ಪಟ್ಟಿತೊ, ತತ್ = ಆದ್ದರಿಂದ, ಭದ್ರಂ = ಮಂಗಳಕರವಾದುದು, ನ ಕೃತಂ = ಮಾಡಲ್ಪಡಲಿಲ್ಲ. ತಥಾ ಉಕ್ತಂ ಹಿ = ಹಾಗೆಯೇ ಹೇಳಲ್ಪಟ್ಟದೆಯಷ್ಟೆ.

೩೫. ಅ॥ ನದೀನಾಂ = ಹೊಳೆಗಳ, ಶಸ್ತ್ರಪಾಣೀನಾಂ = ಆಯುಧಗಳನ್ನು ಹಿಡಿದವರ, ನಖಿನಾಂ = ಹರಿತವಾದ ಉಗುರುಗಳುಳ್ಳ ಹುಲಿ ಮೊದಲಾದುವುಗಳ, ಶೃಂಗಿಣಾಂ = ಕೊಂಬುಗಳುಳ್ಳ ಪ್ರಾಣಿಗಳ ವಿಷಯದಲ್ಲಿ, ತಥಾ = ಹಾಗೆಯೇ, ಸ್ತ್ರೀಷು = ಹೆಂಗಸರಲ್ಲಿ, ರಾಜಕುಲೇಷು ಚ = ರಾಜರ ವಂಶದವರಲ್ಲಿಯೂ, ವಿಶ್ವಾಸಃ = ನಂಬಿಕೆಯು, ನ ಕರ್ತವ್ಯಃ ಏವ = ಮಾಡಲೇ ಕೂಡದು.

ತಾ॥ ಹೊಳೆ, ಆಯುಧಧಾರಿಗಳು, ನಖಾಯುಧ ಪ್ರಾಣಿಗಳು, ಕೊಂಬುಗಳುಳ್ಳ ಕೋಣ ಮೊದಲಾದುವುಗಳು, ಹೆಂಗಸರು, ರಾಜರು ಇವರಿಂದ ಆಕಸ್ಮಿಕವಾಗಿ ತೊಂದರೆಯುಂಟಾಗುವ ಸಂಭವ ಇರುವುದರಿಂದ ಇವರನ್ನು ನಂಬಬಾರದು.

२१. अपरं च

सर्वस्य हि परीक्ष्यन्ते स्वभावा नेतरे गुणाः ।
अतीत्य हि गुणान्सर्वान्स्वभावो मूर्ध्नि वर्तते ॥ २० ॥

२२. अन्यच्च ।

स हि, गगनविहारी, कल्मषध्वंसकारी
दशशतकरधारी ज्योतिषां मध्यचारी
विधुरपि, विधियोगाद् ग्रस्यते राहुणासौ,
लिखितमपि, ललाटे प्रोज्झितुं कः समर्थः ॥ २१ ॥

Annotation

२१. ಅ॥ ಅಪರಂ ಚ = ಮತ್ತು, ಸರ್ವಸ್ಯ = ಎಲ್ಲರ, ಸ್ವಭಾವಾಃ = ಸ್ವಭಾವಗಳು, ಪರೀಕ್ಷ್ಯಂತೇ = ಪರೀಕ್ಷಿಸಲ್ಪಡುತ್ತವೆ. ಇತರೇ = ಬೇರೆ, ಗುಣಾಃ = ಗುಣಗಳು, ನ = ಇಲ್ಲ. ಸರ್ವಾನ್ = ಎಲ್ಲಾ, ಗುಣಾನ್ = ಗುಣಗಳನ್ನು; ಅತೀತ್ಯ = ಮೀರಿ, ಸ್ವಭಾವಃ = ಸ್ವಭಾವವು, ಮೂರ್ಧ್ನಿ = ತಲೆಯ ಮೇಲೆ, ವರ್ತತೇ = ಇರುವುದು.

ತಾ॥ ಮನುಷ್ಯರ ಎಲ್ಲಾ ಗುಣಗಳನ್ನೂ ತಡೆದು ಸ್ವಭಾವವೊಂದೇ ಮುಖ್ಯವಾಗಿ ಕಾರ್ಯವನ್ನು ಮಾಡಿಸುವುದರಿಂದ ಇತರ ಗುಣಗಳನ್ನು ಪರೀಕ್ಷಿಸದೆ ಸ್ವಭಾವವನ್ನು ಮಾತ್ರ ಪರೀಕ್ಷೆ ಮಾಡುವರು.

೨೨. ಅ॥ ಅನ್ಯತ್ ಚ = ಮತ್ತು, ಸಃ = ಆ ಚಂದ್ರನು, ಗಗನವಿಹಾರೀ = ಆಕಾಶದಲ್ಲಿ ವಿಹಾರ ಮಾಡುವವನು. ಕಲ್ಮಷ = ಪಾಪವನ್ನು, ಧ್ವಂಸಕಾರೀ = ನಾಶಮಾಡುವವನು. ದಶಶತ = ಸಾವಿರ, ಕರಧಾರೀ = ಕಿರಣಗಳನ್ನು ಧರಿಸಿದವನು. ಜ್ಯೋತಿಷಾಂ = ನಕ್ಷತ್ರಗಳ, ಮಧ್ಯಚಾರೀ ಹಿ = ನಡುವೆ ಸಂಚರಿಸುವವನು. ಅಸೌ ವಿಧುಃ ಅಪಿ = ಈ ಚಂದ್ರನೂ, ವಿಧಿಯೋಗಾತ್ = ಅದೃಷ್ಟದ ಸಂಬಂಧದಿಂದ, ರಾಹುಣಾ = ರಾಹುವಿನಿಂದ, ಗ್ರಸ್ಯತೇ = ನುಂಗಲ್ಪಡುತ್ತಾನೆ. ಲಲಾಟೇ = ಹಣೆಯಲ್ಲಿ, ಲಿಖಿತಂ ಅಪಿ = ಬರೆಯಲ್ಪಟ್ಟ

३८. इति चिन्तयन्नेवासौ, व्याघ्रेण, व्यापादितः, खादितश्च, अतोऽहं ब्रवीमि—'कङ्कणस्य तु लोभेन' इत्यादि । अतः सर्वथाविचारितं कर्म न कर्तव्यम् । यतः ।

३९. सुजीर्णमन्नं सुविचक्षणः सुतः
सुशासिता स्त्री नृपतिः सुसेवितः ।

---

ದ್ದನ್ನೂ, ಪ್ರೋಜ್ಝಿತುಂ=ಅಳಿಸುವುದಕ್ಕೆ, ಸಮರ್ಥಃ=ಶಕ್ತನು, ಕಃ= ಯಾವನು ?

ತಾ॥ ಚಂದ್ರನು ಆಕಾಶದಲ್ಲಿ ವಿಹಾರ ಮಾಡುವವನು. ಕತ್ತಲೆ ಪಾಪ ಮೊದಲಾದುವುಗಳನ್ನು ನಿವಾರಿಸುವವನು. ಸಾವಿರಾರು ಕಿರಣಗಳುಳ್ಳವನು. ಎಲ್ಲಾ ನಕ್ಷತ್ರಗಳಿಗೆ ಒಡೆಯನಾಗಿ ಅವುಗಳ ನಡುವೆ ಸಂಚರಿಸುವವನು. ಹೀಗೆ ಸಮರ್ಥನಾದ ಚಂದ್ರನನ್ನೂ ವಿಧಿನಿಯಮದಿಂದ ರಾಹುವು ನುಂಗುವನು. ಅಂದರೆ ಅವನಿಗೂ ಗ್ರಹಣವಾಗುವುದು. ಆದ್ದರಿಂದ ಏನು ಆಗಬೇಕೆಂದು ವಿಧಿಯು ವಿಧಿಸಿರುವನೊ ಅದನ್ನು ಯಾರಿಗೂ ನಿವಾರಿಸಲು ಸಾಧ್ಯವಿಲ್ಲ.

೩೮. ಅ॥ ಅಸೌ=ಈ ದಾರಿಗನು, ಇತಿ=ಈ ರೀತಿ, ಚಿಂತಯನ್ ಏವ =ಆಲೋಚಿಸುತ್ತಲೇ, ವ್ಯಾಘ್ರೇಣ=ಹುಲಿಯಿಂದ, ವ್ಯಾಪಾದಿತಃ=ಕೊಲ್ಲಲ್ಪಟ್ಟನು. ಚ=ಮತ್ತು, ಖಾದಿತಃ=ತಿನ್ನಲ್ಪಟ್ಟನು. ಅತಃ=ಈ ಕಾರಣದಿಂದ, ಅಹಂ=ನಾನು, ಬ್ರವೀಮಿ=ಹೇಳುತ್ತೇನೆ. 'ಕಂಕಣಸ್ಯ ತು ಲೋಭೇನ' ಇತ್ಯಾದಿ=ಬಳೆಯ ಆಶೆಯಿಂದ ಎಂಬುದೇ ಮೊದಲಾದುವನ್ನು. ಅತಃ=ಇದರಿಂದ, ಸರ್ವಥಾ=ಎಲ್ಲಾ ಪ್ರಕಾರದಿಂದಲೂ, ಅವಿಚಾರಿತಂ= ವಿಚಾರ ಮಾಡಲ್ಪಡದ, ಕರ್ಮ=ಕೆಲಸವನ್ನು, ನ ಕರ್ತವ್ಯಂ=ಮಾಡಕೂಡದು. ಯತಃ=ಯಾವ ಕಾರಣದಿಂದ.

೩೯. ಅ॥ ಸುಜೀರ್ಣಂ=ಚೆನ್ನಾಗಿ ಪಚನವಾದ, ಅನ್ನಂ=ಅನ್ನವು, ಸುವಿಚಕ್ಷಣಃ=ಅತ್ಯಂತ ಕುಶಲನಾದ, ಸುತಃ=ಮಗನು, ಸುಶಾಸಿತಾ=

सुचिन्त्य चोक्तं सुविचार्य यत्कृतं
सुदीर्घकालेऽपि न याति विक्रियाम् ॥ २२ ॥

೪೦. एतद्वचनं श्रुत्वा कश्चित्कपोतः सदर्पमाह—आः किमेवमुच्यते ।

೪೧. वृद्धानां वचनं ग्राह्यमापत्काले ह्युपस्थिते ।
सर्वत्रैवं विचारेण भोजनेऽप्यप्रवर्तनम् ॥ २३ ॥

ಚೆನ್ನಾಗಿ ಶಿಕ್ಷಿತಳಾದ, ಸ್ತ್ರೀ = ಹೆಂಗಸು, ಸುಸೇವಿತಃ = ಚೆನ್ನಾಗಿ ಸೇವಿಸಲ್ಪಟ್ಟ, ನೃಪತಿಃ = ದೊರೆಯು, ಸುಚಿಂತ್ಯ = ಚೆನ್ನಾಗಿ ಆಲೋಚಿಸಿ, ಉಕ್ತಂ = ಹೇಳಲ್ಪಟ್ಟದು, ಚ = ಮತ್ತು, ಸುವಿಚಾರ್ಯ = ಚೆನ್ನಾಗಿ ವಿಮರ್ಶಿಸಿ, ಕೃತಂ ಯತ್ = ಮಾಡಲ್ಪಟ್ಟದು ಯಾವುದೋ (ಇವು) ಸುದೀರ್ಘಕಾಲೇ ಅಪಿ = ಬಹಳ ಕಾಲದಲ್ಲಿಯೂ, ವಿಕ್ರಿಯಾಂ = ವ್ಯತ್ಯಾಸವನ್ನು, ನ ಯಾತಿ = ಹೊಂದ, ವುದಿಲ್ಲ.

ತಾ॥ ತಿಂದು ಚೆನ್ನಾಗಿ ಜೀರ್ಣವಾದ ಆಹಾರ, ಬುದ್ಧಿಶಾಲಿಯಾದ ಮಗು ಒಳ್ಳೆ ಶಿಕ್ಷಣವನ್ನು ಹೊಂದಿದ ಹೆಂಗಸು, ಚೆನ್ನಾಗಿ ಸೇವಿಸಿದ ರಾಜ, ಚೆನ್ನಾಗಿ ಆಲೋಚಿಸಿ ಹೇಳಿದ ಮಾತು, ಚೆನ್ನಾಗಿ ವಿಚಾರ ಮಾಡಿದ ಕೆಲಸ ಇವುಗಳು ಎಷ್ಟು ಕಾಲವಾದರೂ ಬದಲಾವಣೆಯನ್ನು ಹೊಂದುವುದಿಲ್ಲ.

೪೦. ಅ॥ ಏತತ್ ವಚನಂ = ಈ ಮಾತನ್ನು, ಶ್ರುತ್ವಾ = ಕೇಳಿ, ಕಶ್ಚಿತ್ ಕಪೋತಃ = ಒಂದು ಪಾರಿವಾಳವು, ಸದರ್ಪಂ = ಅಹಂಕಾರದಿಂದ ಸಹಿತವಾಗಿ, ಆಹ = ಹೇಳಿತು. ಆಃ ಕಿಮೇವಂ ಉಚ್ಯತೇ = ಏನು ಹೀಗೆ ಹೇಳಲ್ಪಡುತ್ತದೆ.

೪೧. ಅ॥ ಆಪತ್ಕಾಲೇ = ಕಷ್ಟಸಮಯವು, ಉಪಸ್ಥಿತೇ = ಸಮೀಪಿಸಲು, ವೃದ್ಧಾನಾಂ = ಮುದುಕರ ಅಥವಾ ಜ್ಞಾನವೃದ್ಧರ, ವಚನಂ = ಮಾತು, ಗ್ರಾಹ್ಯಂ ಹಿ = ಸ್ವೀಕರಿಸತಕ್ಕದಷ್ಟೆ, ಸರ್ವತ್ರ = ಎಲ್ಲಾ ವಿಷಯದಲ್ಲಿ, ಏವಂ = ಹೀಗೆ, ವಿಚಾರೇಣ = ವಿಚಾರಮಾಡುವುದರಿಂದ, ಭೋಜನೇ ಅಪಿ = ಊಟದಲ್ಲಿಯೂ, ಅಪ್ರವರ್ತನಂ = ತೊಡಗದಿರುವಿಕೆಯು ಸಂಭವಿಸೀತು.

೪೨. यतः ।

शङ्काभिः सर्वमाक्रान्तमन्नं पानं च भूतले ।
प्रवृत्तिः कुत्र कर्तव्या जीवितव्यं कथं नु वा ॥ २४ ॥

೪೩. ईर्ष्यी घृणी त्वसन्तुष्टः क्रोधनो नित्यशङ्कितः ।
परभाग्योपजीवी च षडेते दुःखभागिनः ॥ २५ ॥

---

ತಾ॥ ಕಷ್ಟಕಾಲದಲ್ಲಿ ಮಾತ್ರ ವೃದ್ಧರ ಮಾತನ್ನು ಕೇಳಬೇಕು. ಎಲ್ಲಾ ವಿಷಯದಲ್ಲಿಯೂ ವೃದ್ಧರನ್ನು ವಿಚಾರ ಮಾಡುತ್ತ ಹೋದರೆ ಊಟವನ್ನೂ ಮಾಡಲು ಸಾಧ್ಯವಾಗಲಾರದು.

೪೨ ಅ॥ ಯತಃ = ಯಾವ ಕಾರಣದಿಂದ, ಭೂತಲೇ = ಭೂಮಿಯಲ್ಲಿ, ಅನ್ನಂ = ಅನ್ನವು, ಪಾನಂ ಚ = ನೀರೂ, ಸರ್ವಂ = ಎಲ್ಲವೂ, ಶಂಕಾಭಿಃ = ಕಳವಳಗಳಿಂದ, ಆಕ್ರಾಂತಂ = ಆಕ್ರಮಿಸಲ್ಪಟ್ಟವೆ. ಕುತ್ರ = ಯಾವುದರಲ್ಲಿ, ಪ್ರವೃತ್ತಿಃ ಕರ್ತವ್ಯಾ = ತೊಡಗಬೇಕು. ಕಥಂ ನು ವಾ = ಹೇಗೆ, ಜೀವಿತವ್ಯಂ = ಬದುಕಬೇಕು.

ತಾ॥ ಪ್ರಪಂಚದಲ್ಲಿ ಅನ್ನ, ನೀರು ಮೊದಲಾದ ಎಲ್ಲವನ್ನು ಸ್ವೀಕರಿಸುವಾಗಲೂ ಇದರಿಂದೇನಾದರೂ ತೊಂದರೆಯಾದೀತೋ ಏನೊ ಎಂದು ಸಂದೇಹ ಮೂಡುವುದು. ಹೀಗೆ ಸಂದೇಹಪಡುತ್ತಿದ್ದರೆ ಯಾವ ಕೆಲಸದಲ್ಲಿಯೂ ತೊಡಗುವುದು ಕಷ್ಟವಾಗುವುದು. ಹಾಗೆ ಕಾರ್ಯದಲ್ಲಿ ತೊಡಗದಿದ್ದರೆ ಜೀವಿಸುವುದು ಹೇಗೆ ?

೪೩. ಅ॥ ಈರ್ಷ್ಯೀ = ಅಸೂಯೆಯುಳ್ಳವನು, ಘೃಣೀ = ದಯೆಯುಳ್ಳವನು, ಅಸಂತುಷ್ಟಃ = ತೃಪ್ತಿಯಿಲ್ಲದವನು, ಕ್ರೋಧನಃ = ಕೋಪಿಷ್ಠನು, ನಿತ್ಯಶಂಕಿತಃ = ಯಾವಾಗಲೂ ಸಂದೇಹಪಡುವವನು. ಪರಭಾಗ್ಯ = ಇನ್ನೊಬ್ಬರ ಐಶ್ವರ್ಯದಿಂದ, ಉಪಜೀವೀ = ಬದುಕುವವನು, ಏತೇ ಷಟ್ ಚ = ಈ ಆರು ಜನರೂ, ದುಃಖಭಾಗಿನಃ = ದುಃಖಗೊಳ್ಳುವರು.

ತಾ॥ ಹೊಟ್ಟೆಕಿಚ್ಚುಳ್ಳವನು, ದಯಾಳು, ತೃಪ್ತಿಯಿಲ್ಲದವನು, ಕೋಪಿ

೪೪. एतत् श्रुत्वा सर्वे कपोतास्तत्रोपविष्टाः । यतः ।

೪೫. सुमहान्त्यपि शास्त्राणि धारयन्तो बहुश्रुताः ।
छेत्तारः संशयानां च क्लिश्यन्ते लोभमोहिताः ॥ २६ ॥

೪೬. अन्यच्च ।
लोभात्क्रोधः प्रभवति लोभात्कामः प्रजायते ।
लोभान्मोहश्च नाशश्च लोभः पापस्य कारणम् ॥ २७ ॥

---

ಷ್ಟನು, ಯಾವಾಗಲೂ ಸಂದೇಹಗೊಳ್ಳುವವನು, ಇನ್ನೊಬ್ಬರ ಸ್ವತ್ತಿನಿಂದ ಜೀವಿಸುವವನು, ಈ ಆರು ಜನರೂ ಕಷ್ಟಪಡುವರು.

೪೪. ಅ॥ ಏತತ್=ಇದನ್ನು, ಶ್ರುತ್ವಾ=ಕೇಳಿ, ಸರ್ವೇ=ಎಲ್ಲಾ, ಕಪೋತಾಃ=ಪಾರಿವಾಳಗಳು, ತತ್ರ=ಆ ಬಲೆಯ ಮೇಲೆ, ಉಪವಿಷ್ಟಾಃ= ಕೂತವು. ಯತಃ=ಯಾವ ಕಾರಣದಿಂದ

೪೫ ಅ॥ ಸುಮಹಾಂತಿ=ಹೆಚ್ಚಾದ, ಶಾಸ್ತ್ರಾಣಿ=ಶಾಸ್ತ್ರಗಳನ್ನು, ಧಾರಯಂತಃ=ತಿಳಿದಿರುವ, ಸಂಶಯಾನಾಂ=ಸಂದೇಹಗಳನ್ನು, ಛೇತ್ತಾರಃ= ನಿವಾರಿಸುವ, ಬಹುಶ್ರುತಾಃ ಅಪಿ=ಜ್ಞಾನಿಗಳೂ, ಲೋಭಮೋಹಿತಾಃ= ಆಶೆಯಿಂದ ಭ್ರಾಂತಿಗೊಂಡವರಾಗಿ, ಕ್ಲಿಶ್ಯಂತೇ=ಕಷ್ಟಪಡುತ್ತಾರೆ.

ತಾ॥ ಅನೇಕ ಶಾಸ್ತ್ರಗಳನ್ನು ಓದಿ ಇತರರ ಸಂದೇಹಗಳನ್ನು ಪರಿಹರಿಸುವ ವಿದ್ವಾಂಸರೂ ಆಶೆಯಿಂದ ಭ್ರಾಂತರಾಗಿ ಕಷ್ಟಪಡುವರು.

೪೬. ಅ॥ ಅನ್ಯಚ್ಚ=ಮತ್ತೂ, ಲೋಭಾತ್=ಅತ್ಯಾಶೆಯಿಂದ, ಕ್ರೋಧಃ =ಕೋಪವು, ಪ್ರಭವತಿ=ಉಂಟಾಗುತ್ತದೆ. ಲೋಭಾತ್, ಕಾಮಃ= ಕಾಮವು, ಪ್ರಜಾಯತೇ=ಉಂಟಾಗುತ್ತದೆ. ಲೋಭಾತ್, ಮೋಹಃ ಚ= ಭ್ರಾಂತಿಯೂ, ನಾಶಃ ಚ=ನಾಶವೂ, ಉಂಟಾಗುತ್ತದೆ. ಲೋಭಃ= ಅತ್ಯಾಶೆಯು, ಪಾಪಸ್ಯ=ಪಾಪಕ್ಕೆ, ಕಾರಣಂ=ಕಾರಣವಾಗುವುದು.

೪೭. अन्यच्च ।

असम्भवं हेममृगस्य जन्म
तथापि रामो लुलुभे मृगाय ।
प्रायस्समापन्नविपत्तिकाले
धियोऽपि पुंसां मलिनीभवन्ति ॥ ೪೭ ॥

೪೮. अनन्तरं सर्वे जालेन बद्धा बभूवुः । ततो यस्य वचनात्तत्रावलम्बितास्तं सर्वे तिरस्कुर्वन्ति । यतः ।

---

ತಾ॥ ಅತ್ಯಾಶೆಯಿಂದ ಅಪೇಕ್ಷಿಸಿದ ವಸ್ತುವು ಸಿಕ್ಕದಿದ್ದಾಗ ಕೋಪವುಂಟಾಗುವುದು. ಲೋಭದಿಂದ ಕಾಮವುಂಟಾಗುವುದು. ಆಶಾಗ್ರಸ್ತನಾದವನನ್ನು ಅಜ್ಞಾನವು ಆವರಿಸುವುದು. ಲೋಭದಿಂದ ಅಕಾರ್ಯವನ್ನು ಮಾಡಿ ನಾಶಕ್ಕೀಡಾಗುವನು. ಆದರಿಂದ ಪಾಪವೂ ಉಂಟಾಗುವುದು.

೪೭. ಅ॥ ಅನ್ಯಚ್ಚ = ಮತ್ತೂ, ಹೇಮಮೃಗಸ್ಯ = ಚಿನ್ನದ ಜಿಂಕೆಯ, ಜನ್ಮ = ಹುಟ್ಟು, ಅಸಂಭವಂ = ಇಲ್ಲದೆ ಇರುವುದು. ತಥಾ ಅಪಿ = ಹಾಗಾದರೂ, ರಾಮಃ = ದಾಶರಥಿಯು, ಮೃಗಾಯ = ಜಿಂಕೆಗಾಗಿ, ಲುಲುಭೇ = ಆಶೆಗೊಂಡನು, ಸಮಾಪನ್ನ = ಸಮೀಪಿಸಿದ, ವಿಪತ್ತಿಕಾಲೇ = ಆಪತ್ತಿನ ಸಮಯದಲ್ಲಿ, ಪುಂಸಾಂ = ಪುರುಷರ, ಧಿಯಃ ಅಪಿ = ಬುದ್ಧಿಯೂ, ಪ್ರಾಯಃ = ಬಹಳ ಮಟ್ಟಿಗೆ, ಮಲಿನೀಭವಂತಿ = ಮಂಕಾಗುತ್ತದೆ

ತಾ॥ ಪ್ರಪಂಚದಲ್ಲಿ ಚಿನ್ನದ ಜಿಂಕೆಯ ಹುಟ್ಟಿನ ಊಹೆಯೇ ಇಲ್ಲ. ಹಾಗಿದ್ದರೂ ಪ್ರಾಜ್ಞನಾದ ಶ್ರೀರಾಮನು ಸೀತೆಗಾಗಿ ಚಿನ್ನದ ಜಿಂಕೆಯನ್ನು ಹಿಡಿಯಲು ಆಶೆಗೊಂಡು ಆ ಸೀತೆಯನ್ನೇ ಕಳೆದುಕೊಂಡು ಕಷ್ಟಪಟ್ಟನು. ಆಪತ್ತು ಒದಗಿದಾಗ ಬುದ್ಧಿಶಾಲಿಗಳ ಬುದ್ಧಿಯೂ ಮಂಕಾಗುವುದು.

೪೮. ಅ॥ ಅನಂತರಂ = ತರುವಾಯ, ಸರ್ವೇ = ಎಲ್ಲಾ ಪಾರಿವಾಳಗಳು, ಜಾಲೇನ = ಬಲೆಯಿಂದ, ಬದ್ಧಾಃ = ಕಟ್ಟಲ್ಪಟ್ಟುವು, ಬಭೂವುಃ = ಆದುವು.

१९ न गणस्याग्रतो गच्छेत्सिद्धे कार्ये समं फलम् ।
यदि कार्यविपत्तिः स्यान्मुखरस्तत्र हन्यते ॥ १९ ॥

ಶಂ. तस्य तिरस्कारं कृत्वा चित्रग्रीव उवाच—'नायमस्य दोषः । यतः ।

---

ತತಃ=ಅನಂತರ, ಯಸ್ಯ=ಯಾವ ಪಾರಿವಾಳದ, ವಚನಾತ್=ಮಾತಿನಿಂದ, ತತ್ರ=ಆ ಬಲೆಯಲ್ಲಿ, ಅವಲಂಬಿತಾಃ=ಸಿಕ್ಕಿಕೊಂಡವೊ, ತಂ=ಆ ಪಾರಿವಾಳವನ್ನು, ಸರ್ವೇ=ಎಲ್ಲಾ ಪಾರಿವಾಳಗಳೂ, ತಿರಸ್ಕುರ್ವಂತಿ=ಬೈದು ಅವಮಾನ ಮಾಡಿದುವು. ಯತಃ=ಏತಕ್ಕೆಂದರೆ,

೧೯ ಅ॥ ಗಣಸ್ಯ=ಗುಂಪಿನ, ಅಗ್ರತಃ=ಮುಂದೆ, ನ ಗಚ್ಛೇತ್=ಹೋಗಕೂಡದು. ಕಾರ್ಯೇ=ಕೆಲಸವು, ಸಿದ್ಧೇ=ಕೈಗೂಡಲು, ಫಲಂ=ಪ್ರಯೋಜನವು, ಸಮಂ=ಸಮವಾಗುವುದು. ಕಾರ್ಯವಿಪತ್ತಿಃ ಯದಿ ಸ್ಯಾತ್=ಕೆಲಸವು ಕೆಟ್ಟುಹೋದರೆ, ತತ್ರ=ಆ ಗುಂಪಿನಲ್ಲಿ, ಮುಖರಃ=ಅಹಿತವನ್ನಾಡಿದ ಮುಂದಾಳು, ಹನ್ಯತೇ=ತಿರಸ್ಕಾರ ಮಾಡಲ್ಪಡುತ್ತಾನೆ.

ತಾ॥ ಒಂದು ಗುಂಪಿನಲ್ಲಿ ಮುಂದಾಳಾಗಿ ಕೆಲಸವನ್ನು ಮಾಡಕೂಡದು. ಹಾಗೆ ಮಾಡಿದಲ್ಲಿ ಒಂದು ವೇಳೆ ಕಾರ್ಯ ಕೈಗೂಡಿ ಒಳ್ಳೆದಾದರೆ ಅದರ ಪ್ರಯೋಜನವು ಗುಂಪಿನವರಿಗೆಲ್ಲಾ ಸಮವಾಗಿ ಹಂಚಿಹೋಗುವುದು. ಕೆಲಸವು ಕೆಟ್ಟುಹೋದಲ್ಲಿ ಇವನು ಕೆಟ್ಟುದನ್ನು ಹೇಳಿ ನಮಗೆ ತೊಂದರೆ ಮಾಡಿದನೆಂದು ಮುಂದಾಳನ್ನು ಇತರರು ಬೈಯ್ಯುವರು.

ಶಂ. ಅ॥ ತಸ್ಯ=ಆ ಪಾರಿವಾಳದ, ತಿರಸ್ಕಾರಂ=ನಿಂದೆಯನ್ನು, ಕೃತ್ವಾ=ಮಾಡಿ, ಚಿತ್ರಗ್ರೀವಃ=ಚಿತ್ರಗ್ರೀವನು, ಉವಾಚ=ಹೇಳಿದನು. ಅಯಂ=ಇದು, ಅಸ್ಯ=ಈ ಪಾರಿವಾಳದ, ದೋಷಃ=ದೋಷವು, ನ=ಅಲ್ಲ. ಯತಃ=ಯಾವ ಕಾರಣದಿಂದ,

आपदामापतन्तीनां हितोऽप्यायाति हेतुताम् ।
मातृजङ्घा हि वत्सस्य स्तम्भीभवति बन्धने ॥ ३० ॥

೩೧. अन्यच्च ।

स बन्धुर्यो विपन्नानामापदुद्धरणक्षमः ।
न तु भीतपरित्राणवस्तूपालम्भपण्डितः ॥ ३१ ॥

೩೨. विपत्काले विस्मय एव कापुरुषलक्षणम् । तदत्र धैर्यमवलम्ब्य प्रतीकारश्चिन्त्यताम् । यतः ।

---

ಅ॥ ಆಪತಂತೀನಾಂ=ಬರುತ್ತಿರುವ, ಆಪದಾಂ=ಆಪತ್ತುಗಳಿಗೆ, ಹಿತಃ ಅಪಿ=ಸ್ನೇಹಿತನೂ, ಹೇತುತಾಂ=ಕಾರಣತ್ವವನ್ನು, ಆಯಾತಿ=ಹೊಂದುತ್ತಾನೆ. ಹಿ=ಯಾವ ಕಾರಣದಿಂದ, ವತ್ಸಸ್ಯ=ಕರುವಿಗೆ, ಮಾತೃಜಂಘಾ=ತಾಯಿಯ ಮೊಣಕಾಲು, ಬಂಧನೇ=ಕಟ್ಟುವುದರಲ್ಲಿ, ಸ್ತಂಭೀಭವತಿ=ಕಂಬವಾಗುವುದು.

ತಾ॥ ಹಸುವನ್ನು ಕರೆಯುವಾಗ ಬೇರೆ ಗೂಟವಿಲ್ಲದಿರಲು ಕರುವನ್ನು ತಾಯಿಯ ಕಾಲಿಗೇ ಕಟ್ಟುವರು. ಹಾಗೆಯೇ ಕಷ್ಟವು ಒದಗುತ್ತಿರಲು ಅದಕ್ಕೆ ಮಿತ್ರನೂ ಕಾರಣನಾಗುತ್ತಾನೆ.

೩೧. ಅ॥ ಅನ್ಯಚ್ಚ=ಮತ್ತೂ, ಯಃ=ಯಾವನು, ಆಪತ್=ಕಷ್ಟದಿಂದ, ಉದ್ಧರಣ=ರಕ್ಷಿಸುವುದರಲ್ಲಿ; ಕ್ಷಮಃ=ಸಮರ್ಥನೊ, ಸಃ=ಅವನು, ಬಂಧುಃ=ಬಂಧುವು. ಭೀತ=ಭಯಗೊಂಡವನ, ಪರಿತ್ರಾಣ=ಕಾಪಾಡುವುದರಲ್ಲಿ, ವಸ್ತು=ಸಾಧನವಾದ ಪದಾರ್ಥದ, ಉಪಾಲಂಭ=ನಿಂದಿಸುವುದರಲ್ಲಿ, ಪಂಡಿತಃ=ಕುಶಲನಾದವನು, ನ=ಅಲ್ಲ.

ತಾ॥ ಕಷ್ಟಪಡುವವರ ಕಷ್ಟಗಳನ್ನು ಪರಿಹರಿಸುವುದರಲ್ಲಿ ಶಕ್ತನಾದವನೇ ಬಂಧುವು. ಕಷ್ಟಪಡುವವನನ್ನು ರಕ್ಷಿಸುವುದಕ್ಕೆ ಸಾಧನವಾದ ಪದಾರ್ಥವನ್ನು ಇದು ಸರಿಯಿಲ್ಲವೆಂದು ತೆಗಳುತ್ತ ಕಾಲಕಳೆಯುವವನು ಬಂಧುವಲ್ಲ.

೩೨. ಅ॥ ವಿಪತ್ಕಾಲೇ=ಕಷ್ಟಕಾಲದಲ್ಲಿ, ವಿಸ್ಮಯಃ ಏವ=ಆಶ್ಚರ್ಯ

೫೩. विपदि धैर्यमथाभ्युदये क्षमा
सदसि वाक्पटुता युधि विक्रमः ।
यशसि चाभिरुचिर्व्यसनं श्रुतौ
प्रकृतिसिद्धमिदं हि महात्मनाम् ॥ ३२ ॥

೫೪. सम्पदि यस्य न हर्षो विपदि विषादो रणे च धीरत्वम् ।
तं भुवनत्रयतिलकं जनयति जननी सुतं विरलम् ॥ ३३ ॥

---

ಗೊಳ್ಳುವುದೇ, ಕಾಪುರುಷಲಕ್ಷಣಂ = ದುಷ್ಟನ ಗುರುತು. ತತ್ = ಆದ್ದರಿಂದ, ಅತ್ರ = ಇಲ್ಲಿ, ಧೈರ್ಯಂ = ಧೈರ್ಯವನ್ನು, ಅವಲಂಬ್ಯ = ಆಶ್ರಯಿಸಿ, ಪ್ರತೀಕಾರಃ = ಪ್ರತಿಕ್ರಿಯೆಯು, ನಿವಾರಣೋಪಾಯವು, ಚಿಂತ್ಯತಾಂ = ಆಲೋಚಿಸಲ್ಪಡಲಿ, ಯತಃ = ಯಾವ ಕಾರಣದಿಂದ,

೫೩. ಅ॥ ವಿಪದಿ = ಆಪತ್ತಿನಲ್ಲಿ, ಧೈರ್ಯಂ = ಧೈರ್ಯವು, ಅಥ = ಅನಂತರ, ಅಭ್ಯುದಯೇ = ಏಳಿಗೆಯಲ್ಲಿ, ಕ್ಷಮಾ = ಸಹನೆಯು, ಸದಸಿ = ಸಭೆಯಲ್ಲಿ, ವಾಕ್ಪಟುತಾ = ಮಾತಿನ ಚಾತುರ್ಯವು, ಯುಧಿ = ಯುದ್ಧದಲ್ಲಿ, ವಿಕ್ರಮಃ = ಪರಾಕ್ರಮವು, ಯಶಸಿ = ಕೀರ್ತಿಯಲ್ಲಿ, ಅಭಿರುಚಿಃ = ಅಭಿಲಾಷೆಯು, ಚ = ಮತ್ತು, ಶ್ರುತೌ = ಶಾಸ್ತ್ರಗಳನ್ನು ಕೇಳುವುದರಲ್ಲಿ, ವ್ಯಸನಂ = ಆಸಕ್ತಿಯು, ಇದಂ = ಇದು, ಮಹಾತ್ಮನಾಂ = ಮಹಾತ್ಮರ, ಪ್ರಕೃತಿಸಿದ್ಧಂ = ಸ್ವಭಾವಸಿದ್ಧವಾದುದಷ್ಟೆ.

ತಾ॥ ಆಪತ್ತು ಒದಗಿದಾಗ ಧೈರ್ಯ, ಸಂಪತ್ತಿನ ಸಮೃದ್ಧಿಯಲ್ಲಿ ಅಹಂಕಾರಪಡದೆ ಸಹನೆಯಿಂದಿರುವುದು, ಸಭೆಯಲ್ಲಿ ಮಾತನಾಡುವ ಚಾತುರ್ಯ, ಯುದ್ಧದಲ್ಲಿ ಪರಾಕ್ರಮ, ಯಶಸ್ಸನ್ನು ಗಳಿಸುವುದಲ್ಲಿ ಅಪೇಕ್ಷೆ, ಶಾಸ್ತ್ರಗಳನ್ನು ಕೇಳುವುದರಲ್ಲಿ ಆಸಕ್ತಿ ಇವುಗಳು ಮಹಾತ್ಮರಿಗೆ ಸ್ವಭಾವದಿಂದಲೆ ಬಂದಿರುವುವು.

೫೪. ಅ॥ ಯಸ್ಯ = ಯಾವನಿಗೆ, ಸಂಪದಿ = ಐಶ್ವರ್ಯದಲ್ಲಿ, ಹರ್ಷಃ = ಸಂತೋಷವು, ವಿಪದಿ = ಆಪತ್ತಿನಲ್ಲಿ, ವಿಷಾದಃ = ವ್ಯಥೆಯು, ನ = ಇಲ್ಲವೊ, ರಣೇ ಚ = ಯುದ್ಧದಲ್ಲಿ, ಧೀರತ್ವಂ = ಧೈರ್ಯವಿರುವುದೊ, ಭುವನತ್ರಯತಿಲಕಂ

೫೫. अन्यच्च ।

षड् दोषाः पुरुषेणेह हातव्या भूतिमिच्छता ।
निद्रा तन्द्रा भयं क्रोध आलस्यं दीर्घसूत्रता ॥ ३४ ॥

೫೬. इदानीमपि एवं क्रियताम् । सर्वैरेकचित्तीभूय जालमादायोड्डीयताम् । यतः ।

---

= ಮೂರು ಲೋಕಗಳಿಗೆ ತಿಲಕದಂತಿರುವ, ತಂ = ಆ, ಸುತಂ = ಮಗನನ್ನು, ಜನನೀ = ತಾಯಿಯು, ವಿರಲಂ = ಕಡಮೆಯಾಗಿ, ಜನಯತಿ = ಪಡೆಯುತ್ತಾಳೆ.

ತಾ॥ ಐಶ್ವರ್ಯದಲ್ಲಿ ಹಿಗ್ಗದ, ಆಪತ್ತಿನಲ್ಲಿ ತಗ್ಗದ, ಯುದ್ಧದಲ್ಲಿ ಧೈರ್ಯದಿಂದ ಹೋರಾಡುವ ಮನುಷ್ಯನು ಮೂರು ಲೋಕಗಳಲ್ಲಿ ಶ್ರೇಷ್ಠನು. ಅಂತಹವನು ಪ್ರಪಂಚದಲ್ಲಿರುವುದು ಕಡಮೆ.

೫೫. ಅ॥ ಇಹ = ಈ ಲೋಕದಲ್ಲಿ, ಭೂತಿಂ = ಐಶ್ವರ್ಯವನ್ನು, ಇಚ್ಛತಾ = ಅಪೇಕ್ಷಿಸುವ, ಪುರುಷೇಣ = ಮನುಷ್ಯನಿಂದ, ನಿದ್ರಾ = ನಿದ್ರೆ, ತಂದ್ರಾ = ಅಮಲು (ಮೂರ್ಛೆ), ಭಯಂ = ಹೆದರಿಕೆ, ಕ್ರೋಧಃ = ಕೋಪ, ಆಲಸ್ಯಂ = ಸೋಮಾರಿತನ, ದೀರ್ಘಸೂತ್ರತಾ = ವಿಳಂಬದಿಂದ ಕೆಲಸಮಾಡುವುದು, ಷಟ್ = ಈ ಆರು, ದೋಷಾಃ = ದೋಷಗಳು, ಹಾತವ್ಯಾಃ = ಬಿಡತಕ್ಕವು.

ತಾ॥ ಏಳಿಗೆಯನ್ನು ಬಯಸುವ ಮನುಷ್ಯನು ಅತಿನಿದ್ರೆ, ಎಚ್ಚರ ಇಲ್ಲದಿರುವಿಕೆ, ಹೆದರಿಕೆ, ಸಿಟ್ಟು, ಸೋಮಾರಿತನ, ನಿಧಾನವಾಗಿ ಕೆಲಸಮಾಡುವುದು ಎಂಬ ಆರು ದೋಷಗಳನ್ನು ತ್ಯಜಿಸಬೇಕು.

೫೬. ಅ॥ ಇದಾನೀಂ ಅಪಿ = ಈಗಲೂ, ಏವಂ = ಹೀಗೆ, ಕ್ರಿಯತಾಂ = ಮಾಡಲ್ಪಡಲಿ. ಸರ್ವೈಃ = ಎಲ್ಲರಿಂದಲೂ, ಏಕಚಿತ್ತೀಭೂಯ = ಒಂದೇ ಮನಸ್ಸುಮಾಡಿ, ಜಾಲಂ = ಬಲೆಯನ್ನು, ಆದಾಯ = ತೆಗೆದುಕೊಂಡು, ಉಡ್ಡೀಯತಾಂ = ಹಾರೋಣವಾಗಲಿ.

೫೭. अल्पानामपि वस्तूनां संहतिः कार्यसाधिका ।
तृणैर्गुणत्वमापन्नैर्बध्यन्ते मत्तदन्तिनः ॥ ३५ ॥

೫೮. संहतिः श्रेयसी पुंसां स्वकुलैरल्पकैरपि ।
तुषेणापि परित्यक्ता न प्ररोहन्ति तण्डुलाः ॥ ३६ ॥

೫೯. इति विचिन्त्य पक्षिणस्सर्वे जालमादायोत्पतिताः । अनन्तरं स व्याधः सुदूराज्जालापहारकांस्तानवलोक्य पश्चाद्धावन्नचिन्तयत् ।

---

೫೭. ಅ॥ ಅಲ್ಪಾನಾಂ ಅಪಿ = ಸಣ್ಣವಾದಾಗ್ಯೂ, ವಸ್ತೂನಾಂ = ವಸ್ತುಗಳ, ಸಂಹತಿಃ = ಸಮೂಹವು, ಕಾರ್ಯಸಾಧಿಕಾ = ಕೆಲಸವನ್ನು ಸಾಧಿಸುವುದು. ಗುಣತ್ವಂ = ಹಗ್ಗದತನವನ್ನು, ಆಪನ್ನೈಃ = ಹೊಂದಿದ, ತೃಣೈಃ = ಹುಲ್ಲುಗಳಿಂದ, ಮತ್ತದಂತಿನಃ = ಮದಿಸಿದ ಆನೆಗಳು, ಬಧ್ಯಂತೇ = ಕಟ್ಟಲ್ಪಡುತ್ತವೆ.

ತಾ॥ ವಸ್ತುಗಳು ಸಣ್ಣವಾದಾಗ್ಯೂ ಅವುಗಳು ಒಟ್ಟಿಗೆ ಸೇರಿದರೆ ಕಾರ್ಯವನ್ನು ಸಾಧಿಸುವುವು. ಹುಲ್ಲು ನಿಸ್ಸಾರವಾದಾಗ್ಯೂ ಅದನ್ನು ಸೇರಿಸಿ ಒಸೆದು ಹಗ್ಗ ಮಾಡಿ ಮದ್ದಾನೆಗಳನ್ನೂ ಕಟ್ಟಬಹುದು.

೫೮. ಅ॥ ಅಲ್ಪಕೈಃ ಅಪಿ = ಸ್ವಲ್ಪವಾದಾಗ್ಯೂ, ಸ್ವಕುಲೈಃ = ತಮ್ಮ ಕುಲದವರಿಂದ, ಸಂಹತಿಃ = ಕೂಡುವಿಕೆಯು, ಪುಂಸಾಂ = ಮನುಷ್ಯರಿಗೆ, ಶ್ರೇಯಸೀ = ಶ್ರೇಯಸ್ಸನ್ನುಂಟು ಮಾಡುವುದು. ತುಷೇಣ = ಹೊಟ್ಟಿನಿಂದ, ಪರಿತ್ಯಕ್ತಾಃ ಅಪಿ = ಬಿಡಲ್ಪಟ್ಟವಾದರೂ, ತಂಡುಲಾಃ = ಅಕ್ಕಿಕಾಳುಗಳು, ನಪ್ರರೋಹಂತಿ = ಮೊಳಿಕೆಯಾಗುವುದಿಲ್ಲ.

ತಾ॥ ತಮ್ಮ ವಂಶದವರು ಸಣ್ಣವರಾದರೂ ಅವರೊಡನೆ ಸೇರಿಕೊಂಡರೆ ಮನುಷ್ಯರಿಗೆ ಶ್ರೇಯಸ್ಸನ್ನು ಸಾಧಿಸಲು ಸಾಧ್ಯವಾಗುವುದು. ಭತ್ತವು ಮೊಳಕೆಯಾಗುವುದು. ಆದರೆ ಅದರ ಮೇಲಿನ ಹೊಟ್ಟನ್ನು ತೆಗೆದು ಅಕ್ಕಿ ಮಾಡಿದರೆ ಹೊಟ್ಟು ಅಲ್ಪವಾದರೂ ಅದಿಲ್ಲದಿರುವುದರಿಂದ ಅಕ್ಕಿ ಮೊಳಕೆಯಾಗುವುದಿಲ್ಲ.

೫೯. ಅ॥ ಇತಿ = ಹೀಗೆಂದು, ವಿಚಿಂತ್ಯ = ಆಲೋಚಿಸಿ, ಸರ್ವೇ =

೬೦. **'संहतास्तु हरन्त्येते मम जालं विहङ्गमाः ।**
**यदा तु निपतिष्यन्ति वशमेष्यन्ति मे तदा' ॥ ३७ ॥**

೬೧. ततस्तेषु चक्षुर्विषयातिक्रान्तेषु पक्षिषु स व्याधो निवृत्तः ।

೬೨. अथ लुब्धकं निवृत्तं दृष्ट्वा कपोता ऊचुः—'किमिदानीं कर्तुमुचितम्'। चित्रग्रीव उवाच—

---

ಎಲ್ಲಾ, ಪಕ್ಷಿಣಃ = ಹಕ್ಕಿಗಳು, ಜಾಲಂ = ಬಲೆಯನ್ನು, ಆದಾಯ = ತೆಗೆದುಕೊಂಡು, ಉತ್ಪತಿತಾಃ = ಮೇಲಕ್ಕೆ ಹಾರಿದುವು. ಅನಂತರಂ = ತರುವಾಯ, ಸಃ = ಆ, ವ್ಯಾಧಃ = ಬೇಡನು, ಸುದೂರಾತ್ = ದೂರದಿಂದ, ಜಾಲ = ಬಲೆಯನ್ನು, ಅಪಹಾರಕಾನ್ = ಅಪಹರಿಸಿಕೊಂಡು ಹೋಗುತ್ತಿರುವ, ತಾನ್ = ಆ ಪಾರಿವಾಳಗಳನ್ನು, ಅವಲೋಕ್ಯ = ನೋಡಿ, ಪಶ್ಚಾತ್ = ಹಿಂದೆ, ಧಾವನ್ = ಓಡುತ್ತ, ಅಚಿಂತಯತ್ = ಆಲೋಚಿಸಿದನು.

೬೦. ಅ॥ ಸಂಹತಾಃ = ಒಟ್ಟಿಗೆ ಸೇರಿದ, ಏತೇ = ಈ, ವಿಹಂಗಮಾಸ್ತು = ಹಕ್ಕಿಗಳಾದರೊ, ಮಮ = ನನ್ನ, ಜಾಲಂ = ಬಲೆಯನ್ನು, ಹರಂತಿ = ತೆಗೆದುಕೊಂಡು ಹೋಗುತ್ತಿವೆ. ಯದಾ = ಯಾವಾಗ, ನಿಪತಿಷ್ಯಂತಿ = ಕೆಳಗೆ ಇಳಿಯುವವೊ, ತದಾ = ಆಗ, ಮೇ = ನನ್ನ, ವಶಂ ಏಷ್ಯಂತಿ = ಅಧೀನವಾಗುತ್ತವೆ.

ತಾ॥ ಈ ಪಾರಿವಾಳಗಳು ಒಟ್ಟಿಗೆ ಕೂಡಿಕೊಂಡು ನನ್ನ ಬಲೆಯನ್ನು ಅಪಹರಿಸಿಕೊಂಡು ಹೋಗುತ್ತಿವೆ. ಯಾವಾಗಲಾದರೂ ಅವು ಭೂಮಿಯಲ್ಲಿ ಇಳಿಯುವುವು. ಆಗ ಅವು ನನಗೆ ಸಿಕ್ಕುವುವು.

೬೧. ಅ॥ ತತಃ = ಬಳಿಕ, ತೇಷು ಪಕ್ಷಿಷು = ಆ ಹಕ್ಕಿಗಳು, ಚಕ್ಷುರ್ವಿಷಯಾತಿಕ್ರಾಂತೇಷು = ಅವನ ದೃಷ್ಟಿಯಿಂದ ಮರೆಯಾಗಲು, ಸ ವ್ಯಾಧಃ = ಆ ಬೇಡನು, ನಿವೃತ್ತಃ = ಹಿಂದಿರುಗಿದನು.

೬೨. ಅ॥ ಅಥ = ಬಳಿಕ, ಕಪೋತಾಃ = ಪಾರಿವಾಳಗಳು, ನಿವೃತ್ತಂ =

३८. ‘माता मित्रं पिता चेति स्वभावात् त्रितयं हितम् ।
कार्यकारणतश्चान्ये भवन्ति हितबुद्धयः ॥ ३८ ॥

೬೪. तदस्माकं मित्रं हिरण्यको नाम मूषिकराजो गण्डकीतीरे चित्रवने निवसति । सोऽस्माकं पाशांश्छेत्स्यति ।’ इत्यालोच्य सर्वे हिरण्यकविवरसमीपं गताः । ‘हिरण्यकश्च सर्वदापायशङ्कया शतद्वारं विवरं कृत्वा

---

ಹಿಂದಿರುಗಿದ, ಲುಬ್ಧಕಂ = ಬೇಡನನ್ನು, ದೃಷ್ಟ್ವಾ = ನೋಡಿ, ಊಚುಃ = ಹೇಳಿದುವು. ಇದಾನೀಂ = ಈಗ, ಕಿಂ = ಏನನ್ನು, ಕರ್ತುಂ = ಮಾಡುವುದಕ್ಕೆ, ಉಚಿತಂ = ಯೋಗ್ಯವಾದುದು ? ಚಿತ್ರಗ್ರೀವಃ = ಚಿತ್ರಗ್ರೀವನು, ಉವಾಚ = ಹೇಳಿತು.

೬೩. ಅ॥ ಮಾತಾ = ತಾಯಿ, ಮಿತ್ರಂ = ಸ್ನೇಹಿತ, ಪಿತಾ ಚ ಇತಿ = ತಂದೆಯೆಂದು, ತ್ರಿತಯಂ = ಈ ಮೂರು ಜನರು, ಸ್ವಭಾವಾತ್ = ಸ್ವಭಾವದಿಂದ, ಹಿತಂ = ಹಿತವನ್ನುಂಟು ಮಾಡುವವರು. ಅನ್ಯೇ ಚ = ಇತರರೂ, ಕಾರ್ಯಕಾರಣತಃ = ಕಾರ್ಯಕಾರಣಭಾವದಿಂದ, ಹಿತಬುದ್ಧಯಃ = ಹಿತವನ್ನುಂಟು ಮಾಡುವ ಬುದ್ಧಿಯುಳ್ಳವರು, ಭವಂತಿ = ಆಗುತ್ತಾರೆ.

ತಾ॥ ತಾಯಿ ತಂದೆ ಸ್ನೇಹಿತ ಈ ಮೂವರು ಸ್ವಾಭಾವಿಕವಾಗಿಯೇ ಇಷ್ಟವನ್ನುಂಟು ಮಾಡುವವರು. ಬೇರೆ ಜನರು ಯಾವುದಾದರೂ ಕಾರ್ಯಕಾರಣಗಳ ನಿಮಿತ್ತದಿಂದ ಹಿತವನ್ನು ಬಯಸುವರು.

೬೪. ಅ॥ ತತ್ = ಆದ್ದರಿಂದ, ಅಸ್ಮಾಕಂ = ನಮ್ಮ, ಮಿತ್ರಂ = ಸ್ನೇಹಿತನಾದ, ಹಿರಣ್ಯಕಃ ನಾಮ = ಹಿರಣ್ಯಕನೆಂಬ, ಮೂಷಿಕರಾಜಃ = ಇಲಿಯ ದೊರೆಯು, ಗಂಡಕೀತೀರೆ = ಗಂಡಕೀ ನದಿಯ ದಡದಲ್ಲಿ, ಚಿತ್ರವನೇ = ಚಿತ್ರವನದಲ್ಲಿ, ನಿವಸತಿ = ವಾಸಮಾಡುತ್ತಾನೆ. ಸಃ = ಅವನು, ಅಸ್ಮಾಕಂ = ನಮ್ಮ ಪಾಶಾನ್ = ಹಗ್ಗದ ಕಟ್ಟುಗಳನ್ನು, ಛೇತ್ಸ್ಯತಿ = ಕತ್ತರಿಸುವನು. ಇತಿ = ಹೀಗೆಂದು, ಆಲೋಚ್ಯ = ಆಲೋಚಿಸಿ, ಸರ್ವೇ = ಎಲ್ಲರೂ, ಹಿರಣ್ಯಕ = ಹಿರಣ್ಯಕನೆಂಬ ಇಲಿಯ, ವಿವರಸಮೀಪಂ = ಬಿಲದ ಹತ್ತಿರಕ್ಕೆ, ಗತಾಃ =

निवसति । ततो हिरण्यकः कपोतावपातभयाच्चकितस्तूष्णीं स्थितः । चित्रग्रीव उवाच—सखे हिरण्यक, किमस्मान्न सम्भाषसे ।' ततो हिरण्यक-स्तद्वचनं प्रत्यभिज्ञाय ससम्भ्रमं बहिर्निःसृत्याब्रवीत्—आः पुण्यवानस्मि प्रियसुहृन्मे चित्रग्रीवः समायातः ।

೩೯. यस्य मित्रेण सम्भाषा यस्य मित्रेण संस्थितिः ।
यस्य मित्रेण संलापस्ततो नास्तीह पुण्यवान् ॥ ३९ ॥

---

ಹೋದರು. ಹಿರಣ್ಯಕಶ್ಚ=ಹಿರಣ್ಯಕನೂ, ಸರ್ವದಾ=ಯಾವಾಗಲೂ, ಅಪಾಯಶಂಕಯಾ=ಅಪಾಯದ ಸಂದೇಹದಿಂದ, ಶತದ್ವಾರಂ=ಅನೇಕ ಬಾಗಿಲುಳ್ಳ, ವಿವರಂ=ಬಿಲವನ್ನು, ಕೃತ್ವಾ=ಮಾಡಿ, ನಿವಸತಿ=ವಾಸ ಮಾಡುತ್ತದೆ. ತತಃ=ಬಳಿಕ, ಹಿರಣ್ಯಕಃ=ಹಿರಣ್ಯಕನು, ಕಪೋತ=ಪಾರಿವಾಳದ, ಅವಪಾತ=ಎರಗುವ, ಭಯಾತ್=ಹೆದರಿಕೆಯಿಂದ, ಚಕಿತಃ=ಹೆದರಿದ್ದಾಗಿ, ತೂಷ್ಣೀಂ=ಸುಮ್ಮನೆ, ಸ್ಥಿತಃ=ಇದ್ದಿತು. ಚಿತ್ರಗ್ರೀವಃ ಉವಾಚ=ಚಿತ್ರಗ್ರೀವನು ಹೇಳಿತು. 'ಸಖೇ ಹಿರಣ್ಯಕ=ಸ್ನೇಹಿತನಾದ ಹಿರಣ್ಯಕನೆ ! ಅಸ್ಮಾನ್=ನಮ್ಮನ್ನು ಕುರಿತು, ಕಸ್ಮಾತ್=ಯಾವ ಕಾರಣದಿಂದ, ನ ಸಂಭಾಷಸೇ=ಮಾತಾಡುವುದಿಲ್ಲ.' ತತಃ=ಬಳಿಕ, ಹಿರಣ್ಯಕಃ=ಹಿರಣ್ಯಕನು, ತದ್ವಚನಂ=ಆ ಪಾರಿವಾಳದ ಮಾತನ್ನು, ಪ್ರತ್ಯಭಿಜ್ಞಾಯ=ಗುರುತಿಸಿ, ಸಸಂಭ್ರಮಂ=ಸಡಗರದಿಂದ ಸಹಿತವಾಗಿ, ಬಹಿಃ=ಹೊರಗೆ, ನಿಸ್ಸೃತ್ಯ=ಹೊರಟುಬಂದು, ಅಬ್ರವೀತ್=ಹೇಳಿತು. 'ಆಃ ಪುಣ್ಯವಾನ್ ಅಸ್ಮಿ=ಅಹಹ ಪುಣ್ಯವಂತನಾಗಿದ್ದೇನೆ. ಮೇ=ನನ್ನ, ಪ್ರಿಯಸುಹೃತ್=ಪ್ರಿಯಮಿತ್ರನಾದ, ಚಿತ್ರಗ್ರೀವಃ=ಚಿತ್ರಗ್ರೀವನು, ಸಮಾಯಾತಃ=ಬಂದಿದ್ದಾನೆ.

೩೯. ಅ॥ ಯಸ್ಯ=ಯಾವನಿಗೆ, ಮಿತ್ರೇಣ=ಸ್ನೇಹಿತನೊಡನೆ, ಸಂಭಾಷಾ=ಸಂಭಾಷಣೆಯೊ, ಯಸ್ಯ, ಮಿತ್ರೇಣ=ಯಾವನಿಗೆ ಸ್ನೇಹಿತನೊಡನೆ, ಸಂಸ್ಥಿತಿಃ=ಇರುವಿಕೆಯೊ, ಯಸ್ಯ, ಮಿತ್ರೇಣ, ಸಂಲಾಪಃ=ಪರಸ್ಪರ

೭೭. पाशबद्धांश्चैतान्दृष्ट्वा सविस्मयः क्षणं स्थित्वोवाच—'सखे, किमेतत् ।' चित्रग्रीवोऽवदत्—सखे, अस्माकं प्राक्तनजन्मकर्मणः फलमेतत् ।

೭೮. यस्माच्च येन च यथा च यदा च यच्च
यावच्च यत्र च शुभाशुभमात्मकर्म ।
तस्माच्च तेन च तथा च तदा च तच्च
तावच्च तत्र च विधातृवशादुपैति ॥ ४० ॥

---

ಮಾತುಕತೆಗಳೂ, ತತಃ=ಅವನಿಗಿಂತ, ಇಹ=ಈ ಲೋಕದಲ್ಲಿ, ಪುಣ್ಯವಾನ್ =ಪುಣ್ಯವಂತನು, ನಾಸ್ತಿ=ಇಲ್ಲ.

ತಾ॥ ಈ ಲೋಕದಲ್ಲಿ ಸ್ನೇಹಿತನೊಡನೆ ಸರಸಸಲ್ಲಾಪಗಳನ್ನು ಮಾಡುತ್ತ ಅವನೊಡನೆ ವಾಸಿಸುವವನೇ ಪುಣ್ಯವಂತನು. ಅವನಿಗಿಂತ ಬೇರೆ ಪುಣ್ಯವಂತ ರಿಲ್ಲ.

೭೭. ಅ॥ ಪಾಶಬದ್ಧಾನ್=ಹಗ್ಗಗಳಿಂದ ಕಟ್ಟಿರುವ, ಏತಾನ್=ಈ ಪಾರಿವಾಳಗಳನ್ನು, ದೃಷ್ಟ್ವಾ=ನೋಡಿ, ಸವಿಸ್ಮಯಃ=ಆಶ್ಚರ್ಯದಿಂದ ಸಹಿತನಾಗಿ, ಕ್ಷಣಂ=ಸ್ವಲ್ಪ ಹೊತ್ತು, ಸ್ಥಿತ್ವಾ=ಇದ್ದು, ಉವಾಚ= ಹೇಳಿತು. ಸಖೇ=ಸ್ನೇಹಿತನೆ! ಏತತ್=ಇದು, ಕಿಂ=ಏನು, ಚಿತ್ರಗ್ರೀವಃ =ಚಿತ್ರಗ್ರೀವನು, ಅವದತ್=ಹೇಳಿತು. ಸಖೇ=ಸ್ನೇಹಿತನೆ! ಏತತ್ =ಇದು, ಅಸ್ಮಾಕಂ=ನಮ್ಮ, ಪ್ರಾಕ್ತನಜನ್ಮ=ಹಿಂದಿನ ಜನ್ಮದ, ಕರ್ಮಣಃ=ಕರ್ಮದ, ಫಲಂ=ಫಲವು.

೭೮. ಅ॥ ಯಸ್ಮಾತ್ ಚ=ಯಾವುದರ ದೆಸೆಯಿಂದ, ಯೇನ ಚ= ಯಾವುದರಿಂದ, ಯಥಾ ಚ=ಹೇಗೆ, ಯದಾ ಚ=ಯಾವಾಗ, ಯಚ್ಚ= ಯಾವುದು, ಯಾವಚ್ಚ=ಎಷ್ಟು, ಯತ್ರ ಚ=ಎಲ್ಲಿ, ಶುಭಾಶುಭಂ= ಒಳ್ಳೆಯ ಮತ್ತು ಕೆಟ್ಟ, ಆತ್ಮಕರ್ಮ=ತನ್ನ ಕರ್ಮವೊ, ತಸ್ಮಾತ್ ಚ= ಅದರ ದೆಸೆಯಿಂದ, ತೇನ ಚ=ಅದರಿಂದ, ತಥಾ ಚ=ಹಾಗೆಯೇ, ತದಾ ಚ

೬೮. रोगशोकपरीतापबन्धनव्यसनानि च ।
आत्मापराधवृक्षाणां फलान्येतानि देहिनाम्' ॥ ४१ ॥

೬೯. एतत् श्रुत्वा हिरण्यकश्चित्रग्रीवस्य बन्धनं छेत्तुम् सत्वरं उपसर्पति । चित्रग्रीव उवाच—' मित्र, मा मैवम् । अस्मदाश्रितानामेषां तावत्पाशांश्छिन्धि,(तदा)मम पाशं पश्चाच्छेत्स्यसि ।' हिरण्यकोऽप्याह—'अहमल्पशक्तिः । दन्ताश्च मे कोमलाः । तदेतेषां पाशान् छेत्तुम् कथं समर्थः ।

---

=ಆಗಲೇ, ತತ್ ಚ=ಅದು, ತಾವತ್ ಚ=ಅಷ್ಟು, ತತ್ರ ಚ=ಅಲ್ಲಿಯೇ, ವಿಧಾತೃವಶಾತ್=ವಿಧಿಯ ಅಧೀನತೆಯಿಂದ, ಉಪೈತಿ=ಹೊಂದುತ್ತಾನೆ.

ತಾ॥ ಯಾವುದರ ದೆಸೆಯಿಂದ, ಯಾವುದರಿಂದ, ಹೇಗೆ, ಯಾವಾಗ, ಯಾವುದು ಎಷ್ಟು, ಎಲ್ಲಿ ತಾನು ಒಳ್ಳೆ ಮತ್ತು ಕೆಟ್ಟ ಕಾರ್ಯಗಳನ್ನು ಮಾಡಿರುವನೊ, ಆ ಕರ್ಮವು ವಿಧಿವಶದಿಂದ ಅದರ ದೆಸೆಯಿಂದಲೇ, ಅದರಿಂದಲೇ, ಹಾಗೆಯೇ, ಆಗಲೇ, ಅಷ್ಟು, ಅಲ್ಲಿಯೇ ಸಮೀಪಿಸಿ ಫಲವನ್ನೀಯುವುದು.

೬೮. ಅ॥ ಏತಾನಿ=ಈ, ರೋಗ=ಕಾಯಿಲೆ, ಶೋಕ=ದುಃಖ, ಪರೀತಾಪ=ಸಂತಾಪ, ಬಂಧನ=ಸೆರೆ, ವ್ಯಸನಾನಿ ಚ=ವ್ಯಥೆಗಳೂ, ದೇಹಿನಾಂ =ಪ್ರಾಣಿಗಳಿಗೆ, ಆತ್ಮ=ತಮ್ಮ, ಅಪರಾಧ=ತಪ್ಪೆಂಬ, ವೃಕ್ಷಾಣಾಂ= ಮರಗಳ, ಫಲಾನಿ=ಹಣ್ಣುಗಳು.

ತಾ॥ ಪ್ರಾಣಿಗಳಿಗುಂಟಾಗುವ ಈ ಕಾಯಿಲೆ, ದುಃಖ, ಸಂತಾಪ, ಕಟ್ಟು, ವ್ಯಥೆ ಇವುಗಳು ಅವು ಮಾಡಿರುವ ತಪ್ಪೆಂಬ ಮರಗಳ ಹಣ್ಣುಗಳಾಗಿವೆ.

೬೯. ಅ॥ ಏತತ್=ಇದನ್ನು, ಶ್ರುತ್ವಾ=ಕೇಳಿ, ಹಿರಣ್ಯಕಃ=ಹಿರಣ್ಯಕನು, ಚಿತ್ರಗ್ರೀವಸ್ಯ=ಚಿತ್ರಗ್ರೀವನ, ಬಂಧನಂ=ಕಟ್ಟನ್ನು; ಛೇತ್ತುಂ= ಕತ್ತರಿಸುವುದಕ್ಕೆ, ಸತ್ವರಂ=ಬೇಗನೆ, ಉಪಸರ್ಪತಿ=ಸಮೀಪಿಸುತ್ತದೆ. ಚಿತ್ರಗ್ರೀವಃ ಉವಾಚ-'ಮಿತ್ರ=ಸ್ನೇಹಿತನೆ, ಮಾ ಮಾ ಏವಂ=ಹೀಗೆ ಮಾಡಬೇಡ. ತಾವತ್=ಮೊದಲು, ಅಸ್ಮತ್=ನನ್ನನ್ನು, ಆಶ್ರಿತಾನಾಂ

तद्यावन्मे दन्ता न त्रुट्यन्ति तावत्तव पाशं छिनद्मि । तदनन्तरमेषामपि बन्धनं यावच्छक्यं छेत्स्यामि ।'

चित्रग्रीव उवाच—'अस्त्वेवम् । तथापि यथाशक्त्येतेषां बन्धनं खण्डय ।'

हिरण्यकेनोक्तम्—'आत्मपरित्यागेन यदाश्रितानां परिरक्षणं तन्न नीतिविदां सम्मतम् । यतः ।

---

=ಆಶ್ರಯಿಸಿದ, ಏಷಾಂ=ಈ ಪಾರಿವಾಳಗಳ, ಪಾಶಾನ್=ಹಗ್ಗಗಳನ್ನು, ಛಿಂಧಿ=ಕತ್ತರಿಸು. ಮಮ=ನನ್ನ, ಪಾಶಂ=ಹಗ್ಗವನ್ನು, ಪಶ್ಚಾತ್=ಅನಂತರ, ಛೇತ್ಸ್ಯಸಿ=ಕತ್ತರಿಸುವಿ. ಹಿರಣ್ಯಕಃ ಅಪಿ=ಹಿರಣ್ಯಕನೂ, ಆಹ=ಹೇಳಿತು. ಅಹಂ=ನಾನು, ಅಲ್ಪಶಕ್ತಿಃ=ಸ್ವಲ್ಪ ಸಾಮರ್ಥ್ಯವುಳ್ಳವನು. ಮೇ=ನನ್ನ, ದಂತಾಃ ಚ=ಹಲ್ಲುಗಳೂ, ಕೋಮಲಾಃ=ಮೃದುವಾದುವು. ತತ್=ಆದ್ದರಿಂದ, ಏತೇಷಾಂ=ಈ ಹಕ್ಕಿಗಳ, ಪಾಶಾನ್=ಹಗ್ಗಗಳನ್ನು, ಛೇತ್ತುಂ=ಕತ್ತರಿಸುವುದಕ್ಕೆ, ಕಥಂ=ಹೇಗೆ, ಸಮರ್ಥಃ=ಶಕ್ತನು? ತತ್=ಆದ್ದರಿಂದ, ಮೇ=ನನ್ನ, ದಂತಾಃ=ಹಲ್ಲುಗಳು, ಯಾವತ್=ಎಷ್ಟರಲ್ಲಿ, ನ ತ್ರುಟ್ಯಂತಿ=ತುಂಡಾಗುವುದಿಲ್ಲವೊ, ತಾವತ್=ಅಷ್ಟರಲ್ಲಿ, ತವ=ನಿನ್ನ, ಪಾಶಂ=ಹಗ್ಗವನ್ನು, ಛಿನದ್ಮಿ=ಕತ್ತರಿಸುತ್ತೇನೆ. ತದನಂತರಂ=ಆ ತರುವಾಯ, ಏಷಾಂ=ಈ ಹಕ್ಕಿಗಳ,. ಬಂಧನಂ ಅಪಿ=ಕಟ್ಟನ್ನೂ, ಯಾವತ್ ಶಕ್ಯಂ=ಸಾಧ್ಯವಾದಷ್ಟು, ಛೇತ್ಸ್ಯಾಮಿ=ಕತ್ತರಿಸುವೆನು. ಚಿತ್ರಗ್ರೀವಃ ಉವಾಚ–'ಏವಂ ಅಸ್ತು=ಹೀಗೆಯೇ ಆಗಲಿ. ತಥಾ ಅಪಿ=ಹಾಗಾದರೂ, ಯಥಾಶಕ್ತಿ=ಶಕ್ತ್ಯನುಸಾರವಾಗಿ, ಏತೇಷಾಂ=ಈ ಹಕ್ಕಿಗಳ, ಬಂಧನಂ=ಕಟ್ಟನ್ನು, ಖಂಡಯ=ಕತ್ತರಿಸು.' ಹಿರಣ್ಯಕೇನ ಉಕ್ತಂ=ಹಿರಣ್ಯಕನಿಂದ ಹೇಳಲ್ಪಟ್ಟಿತು. 'ಆತ್ಮಪರಿತ್ಯಾಗೇನ=ತನ್ನ ಪ್ರಾಣವನ್ನು ಬಿಡುವುದರಿಂದ, ಆಶ್ರಿತಾನಾಂ=ಆಶ್ರಯಿಸಿದವರ, ಪರಿರಕ್ಷಣಂ ಯತ್=ಕಾಪಾಡುವುದು ಎಂಬುದು ಯಾವುದೊ, ತತ್=ಅದು, ನೀತಿವಿದಾಂ=ನೀತಿಯನ್ನರಿತವರಿಗೆ, ಸಮ್ಮತಂ=ಒಪ್ಪಿಗೆಯಾದುದು, ನ=ಅಲ್ಲ. ಯತಃ=ಯಾವ ಕಾರಣದಿಂದ,

೭೦. आपदर्थे धनं रक्षेद्दारान्रक्षेद्धनैरपि ।
आत्मानं सततं रक्षेद्दारैरपि धनैरपि ॥ ४२ ॥

೭೧. अन्यच्च ।
धर्मार्थकाममोक्षाणां प्राणाः संस्थितिहेतवः ।
तान्निघ्नता किं न हतं रक्षता किं न रक्षितम्' ॥ ४३ ॥

---

೭೦. ಅ॥ ಆಪದರ್ಥೇ = ಕಷ್ಟಕಾಲಕ್ಕಾಗಿ, ಧನಂ = ಹಣವನ್ನು, ರಕ್ಷೇತ್ = ಕಾಪಾಡಬೇಕು. ಧನೈಃ ಅಪಿ = ಹಣಗಳಿಂದಲೂ, ದಾರಾನ್ = ಹೆಂಡತಿಯನ್ನು, ರಕ್ಷೇತ್ = ಕಾಪಾಡಬೇಕು. ದಾರೈಃ ಅಪಿ = ಹೆಂಡತಿಯಿಂದಲೂ, ಧನೈಃ ಅಪಿ = ಹಣದಿಂದಲೂ, ಸತತಂ = ಯಾವಾಗಲೂ, ಆತ್ಮಾನಂ = ತನ್ನನ್ನು, ರಕ್ಷೇತ್ = ಕಾಪಾಡಿಕೊಳ್ಳಬೇಕು.

ತಾ॥ ಆಪತ್ಕಾಲದಲ್ಲಿ ಒದಗುವ ಕಷ್ಟದ ನಿವಾರಣೆಗಾಗಿ ಹಣವನ್ನು ಕಾಪಾಡಿಕೊಂಡಿರಬೇಕು. ಆ ಹಣದಿಂದ ಹೆಂಡತಿಯನ್ನು ಕಾಪಾಡಬೇಕು. ಆ ಹೆಂಡತಿ ಮತ್ತು ಹಣಗಳಿಂದ ತನ್ನನ್ನು ಕಾಪಾಡಿಕೊಳ್ಳಬೇಕು. ಎಂದರೆ ತನ್ನ ರಕ್ಷಣೆ ಮುಖ್ಯವಾದುದು.

೭೧. ಅ॥ ಅನ್ಯಚ್ಚ = ಮತ್ತೂ, ಪ್ರಾಣಾಃ = ಪ್ರಾಣವು, ಧರ್ಮ = ಧರ್ಮ, ಅರ್ಥ = ಹಣ, ಕಾಮ = ಅಪೇಕ್ಷೆ, ಮೋಕ್ಷಾಣಾಂ = ಮುಕ್ತಿ ಇವುಗಳ, ಸಂಸ್ಥಿತಿ = ಇರುವಿಕೆಗೆ, ಹೇತವಃ = ಕಾರಣಗಳು, ತಾನ್ = ಆ ಪ್ರಾಣವನ್ನು, ನಿಘ್ನತಾ = ನಾಶಗೊಳಿಸುವವನಿಂದ, ಕಿಂ = ಯಾವುದು, ನ ಹತಂ = ಕೊಲ್ಲಲ್ಪಡಲಿಲ್ಲ, ರಕ್ಷತಾ = ಪ್ರಾಣವನ್ನು ಕಾಪಾಡುವವನಿಂದ, ಕಿಂ = ಯಾವುದು, ನ ರಕ್ಷಿತಂ = ಕಾಪಾಡಲ್ಪಡಲಿಲ್ಲ.

ತಾ॥ ಪ್ರಾಣವಿದ್ದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಈ ನಾಲ್ಕು ಪುರುಷಾರ್ಥಗಳನ್ನು ಪಡೆಯಬಹುದು. ಆ ಪ್ರಾಣವನ್ನು ಕಳೆದುಕೊಂಡರೆ ಎಲ್ಲವೂ ಹಾಳಾದಂತೆಯೇ. ಅದನ್ನು ರಕ್ಷಿಸಿಕೊಂಡರೆ ಎಲ್ಲವನ್ನೂ ರಕ್ಷಿಸಿಕೊಂಡಂತೆಯೇ ಆಗುವುದು.

२१. चित्रग्रीव उवाच—'सखे नीतिस्तावदीदृश्येव। किं त्वहमस्मदाश्रितानां दुःखं सोढुं सर्वथासमर्थः। तेनेदं ब्रवीमि। यतः।

२२. धनानि जीवितं चैव परार्थे प्राज्ञ उत्सृजेत्।
सन्निमित्ते वरं त्यागो विनाशे नियते सति॥ ४४॥

२४. अयमपरश्चासाधारणो हेतुः।

जातिद्रव्यगुणानां च साम्यमेषां मया सह।
मत्प्रभुत्वफलं ब्रूहि कदा किं तद्भविष्यति॥ ४५॥

---

೨೧. ಅ॥ ಚಿತ್ರಗ್ರೀವಃ ಉವಾಚ–ಸಖೇ = ಸ್ನೇಹಿತನೇ, ನೀತಿಃ ತಾವತ್ = ನೀತಿಯಾದರೋ, ಈದೃಶೀ ಏವ = ಇಂಥಾದ್ದೇ. ಕಿಂ ತು = ಆದರೆ, ಅಹಂ = ನಾನು, ಅಸ್ಮತ್ = ನನ್ನನ್ನು, ಆಶ್ರಿತಾನಾಂ = ಆಶ್ರಯಿಸಿಕೊಂಡವರ, ದುಃಖಂ = ಕಷ್ಟವನ್ನು, ಸೋಢುಂ = ಸಹಿಸುವುದಕ್ಕೆ, ಸರ್ವಥಾ = ಎಲ್ಲಾ ವಿಧದಿಂದಲೂ, ಅಸಮರ್ಥಃ = ಶಕ್ತನಲ್ಲ. ತೇನ = ಆದ್ದರಿಂದ, ಇದಂ = ಈ ಮಾತನ್ನು, ಬ್ರವೀಮಿ = ಹೇಳುತ್ತೇನೆ. ಯತಃ = ಯಾವ ಕಾರಣದಿಂದ.

೨೨. ಅ॥ ಪ್ರಾಜ್ಞಃ = ಜಾಣನು, ಧನಾನಿ = ಹಣಗಳನ್ನು, ಜೀವಿತಂ ಚ ಏವ = ಪ್ರಾಣವನ್ನೂ, ಪರಾರ್ಥೇ = ಇತರರಿಗಾಗಿ, ಉತ್ಸೃಜೇತ್ = ತ್ಯಾಗ ಮಾಡಬೇಕು. ವಿನಾಶೇ = ನಾಶವು, ನಿಯತೇ ಸತಿ = ನಿಶ್ಚಿತವಾಗಿರಲು, ಸನ್ನಿಮಿತ್ತೇ = ಒಳ್ಳೆಯ ಕಾರಣದಲ್ಲಿ, ತ್ಯಾಗಃ = ದಾನವು, ವರಂ = ಶ್ರೇಷ್ಠವು.

ತಾ॥ ಬುದ್ಧಿಶಾಲಿಯು ಹಣ ಮತ್ತು ಪ್ರಾಣವನ್ನು ಇತರರಿಗಾಗಿ ಬಿಡಬೇಕು. ಅವು ಯಾವಾಗಲಾದರೂ ನಾಶವಾಗುವುವು ಎಂದು ನಿಶ್ಚಯವಾಗಿರಲು ಒಳ್ಳೆಯ ಕಾರಣಕ್ಕಾಗಿ ದಾನಮಾಡುವುದು ಶ್ರೇಷ್ಠವಾದುದು.

೨೪. ಅ॥ ಅಯಂ = ಇದು, ಅಪರಃ = ಮತ್ತೊಂದು, ಅಸಾಧರಣಃ = ಸಾಮಾನ್ಯವಲ್ಲದ, ಹೇತುಃ = ಕಾರಣವು. ಏಷಾಂ = ಇವುಗಳಿಗೆ, ಮಯಾ ಸಹ = ನನ್ನೊಡನೆ, ಜಾತಿ = ಜಾತಿ, ದ್ರವ್ಯ = ಹಣ, ಗುಣಾನಾಂ = ಗುಣ

೭೫. अन्यच्च ।

विना वर्तनमेवैते न त्यजन्ति ममान्तिकम् ।
तन्मे प्राणव्ययेनापि जीवयैतान्ममाश्रितान् ॥ ४६ ॥

೭೬. किं च ।

मांसमूत्रपुरीषास्थिनिर्मितेऽस्मिन्कलेवरे ।
विनश्वरे विहायास्थां यशः पालय मित्र मे ॥ ४७ ॥

---

ಇವುಗಳ, ಸಾಮ್ಯಂ=ಸಮಾನತೆಯು, (ಇದೆ) ಮತ್=ನನ್ನ, ಪ್ರಭುತ್ವ =ಸ್ವಾಮಿತನದ, ಫಲಂ=ಪ್ರಯೋಜನವನ್ನು, ಬ್ರೂಹಿ=ಹೇಳು. ತತ್= ಆ ಪ್ರಯೋಜನವು, ಕದಾ=ಯಾವಾಗಲಾದರೂ, ಭವಿಷ್ಯತಿ ಕಿಂ=ಆಗುವುದೇನು ?

ತಾ॥ ಈ ಹಕ್ಕಿಗಳು ಜಾತಿ, ಹಣ, ಗುಣ ಇವುಗಳಿಂದ ನನಗೆ ಸಮಾನವಾಗಿರುವುವು. ಇವುಗಳಿಗೆ ನಾನು ಸ್ವಾಮಿಯಾಗಿರುವೆನು. ಇದರ ಪ್ರಯೋಜನವನ್ನು ಬೇರೆ ಯಾವಾಗಲಾದರೂ ನನಗೆ ಈ ಪಕ್ಷಿಗಳಿಗೆ ಉಂಟು ಮಾಡಲಾದೀತೋ ಹೇಳು.

೭೫. ಅ॥ ಏತೇ=ಈ ಪಕ್ಕಿಗಳು, ವರ್ತನಂ ವಿನಾ ಏವ=ಜೀವನವಿಲ್ಲದೆ, ಮಮ=ನನ್ನ, ಅಂತಿಕಂ=ಹತ್ತಿರವನ್ನು, ನ ತ್ಯಜಂತಿ =ಬಿಡುವುದಿಲ್ಲ. ತತ್ =ಆದ್ದರಿಂದ, ಮೇ=ನನ್ನನ್ನು, ಪ್ರಾಣವ್ಯಯೇನ ಅಪಿ=ಪ್ರಾಣನಾಶದಿಂದಲಾದರೂ, ಮಮ=ನನ್ನನ್ನು, ಆಶ್ರಿತಾನ್=ಆಶ್ರಯಿಸಿಕೊಂಡಿರುವ, ಏತಾನ್=ಈ ಹಕ್ಕಿಗಳನ್ನು, ಜೀವಯ=ಬದುಕಿಸು. ಇತ್ಯಾದು

ತಾ॥ ಈ ಪಕ್ಷಿಗಳು ತಮ್ಮ ಪ್ರಾಣತ್ಯಾಗ ಕಾಲದಲ್ಲಿಯೇ ನನ್ನನ್ನು ಬಿಡುವುವು. ಆದ್ದರಿಂದ ನನ್ನನ್ನು ಸ್ಥಿರವಾಗಿ ಆಶ್ರಯಿಸಿಕೊಂಡಿರುವ ಇವುಗಳನ್ನು ನನ್ನ ನಾಶದಿಂದಲಾದರೂ ಬದುಕಿಸು. ಎಂದರೆ ನನ್ನ ಪ್ರಾಣಕ್ಕಿಂತ ಇವುಗಳು ಹೆಚ್ಚಾಗಿರುವುದರಿಂದ ಇವುಗಳನ್ನು ಬದುಕಿಸಲೇಬೇಕು.

೭೬. ಅ॥ ಕಿಂ ಚ=ಮತ್ತು, ಮಿತ್ರ=ಸ್ನೇಹಿತನೆ, ಮಾಂಸ=ಮಾಂಸ,

೭೭. अपरं च पश्य ।

**यदि नित्यमनित्येन निर्मलं मलवाहिना ।**
**यशः कायेन लभ्येत तन्न लब्धं भवेन्नु किम् ॥ ४८ ॥**

೭೮. यतः ।

**शरीरस्य गुणानां च दूरमत्यन्तमन्तरम् ।**
**शरीरं क्षणविध्वंसि कल्पान्तस्थायिनो गुणाः' ॥ ४९ ॥**

---

ಮೂತ್ರ = ಮೂತ್ರ, ಪುರೀಷ = ಅಮೇಧ್ಯ, ಅಸ್ಥಿ = ಮೂಳೆ ಇವುಗಳಿಂದ, ನಿರ್ಮಿತೇ = ರಚಿಸಲ್ಪಟ್ಟ, ವಿನಶ್ವರೇ = ನಾಶವಾಗುವ, ಅಸ್ಮಿನ್ = ಈ, ಕಲೇವರೇ = ದೇಹದಲ್ಲಿ, ಆಸ್ಥಾಂ = ಆಸಕ್ತಿಯನ್ನು, ವಿಹಾಯ = ಬಿಟ್ಟು, ಮೇ = ನನ್ನ, ಯಶಃ = ಕೀರ್ತಿಯನ್ನು, ಪಾಲಯ = ಕಾಪಾಡು.

ತಾ॥ ಮಿತ್ರನೆ ಈ ದೇಹವು ಮಾಂಸ, ಮೂತ್ರ, ಅಮೇಧ್ಯ, ಮೂಳೆಗಳಿಂದ ನಿರ್ಮಿತವಾಗಿ ನಾಶವಾಗತಕ್ಕುದು. ಆದ್ದರಿಂದ ಇಂತಹ ನನ್ನೀದೇಹವನ್ನು ರಕ್ಷಿಸುವ ಆಸಕ್ತಿಯನ್ನು ಬಿಟ್ಟು, ನನ್ನ ಕೀರ್ತಿಯನ್ನು ಕಾಪಾಡು.

೭೭. ಅ॥ ಅಪರಂ ಚ ಪಶ್ಯ = ಇನ್ನೊಂದನ್ನೂ ನೋಡು. ಅನಿತ್ಯೇನ = ಶಾಶ್ವತವಲ್ಲದ, ಮಲವಾಹಿನಾ = ಕೊಳೆಯನ್ನು ಧರಿಸಿರುವ, ಕಾಯೇನ = ದೇಹದಿಂದ, ನಿತ್ಯಂ = ಸ್ಥಿರವಾದ, ನಿರ್ಮಲಂ = ಶುದ್ಧವಾದ, ಯಶಃ = ಕೀರ್ತಿಯು, ಯದಿ ಲಭ್ಯೇತ = ಹೊಂದಲ್ಪಟ್ಟದ್ದೇ ಆದರೆ, ತತ್ = ಆಗ, ಕಿಂ = ಯಾವುದು, ಲಬ್ಧಂ = ಹೊಂದಲ್ಪಟ್ಟುದು, ನ ಭವೇತ್ = ಆಗಲಾರದು.

ತಾ॥ ಈ ಶರೀರವು ಸಾಯತಕ್ಕುದು. ಕೊಳೆಗಳನ್ನು ಹೊತ್ತಿರುವುದು. ಇಂತಹ ಅಲ್ಪದೇಹದಿಂದ ಶಾಶ್ವತವಾದ ಮತ್ತು ಶುದ್ಧವಾದ ಕೀರ್ತಿಯು ಲಭಿಸುವುದಾದರೆ ಬೇರೆ ಯಾವುದು ತಾನೆ ಸಿಕ್ಕಲಾರದು.

೭೮. ಅ॥ ಯತಃ = ಯಾವ ಕಾರಣದಿಂದ, ಶರೀರಸ್ಯ = ದೇಹಕ್ಕೂ, ಗುಣಾನಾಂ ಚ = ಗುಣಗಳಿಗೂ, ಅತ್ಯಂತಂ ದೂರಂ = ಬಹಳವಾಗಿ, ಅಂತರಂ =

೭೯. इत्याकर्ण्य हिरण्यकः प्रहृष्टमनाः पुलकितः सन्नब्रवीत्—'साधु मित्र साधु। अनेनाश्रितवात्सल्येन त्रैलोक्यस्यापि प्रभुत्वं त्वयि युज्यते।' एवमुक्त्वा तेन सर्वेषां बन्धनानि छिन्नानि। ततो हिरण्यकः सर्वान् सादरं सम्पूज्याह—'सखे चित्रग्रीव सर्वथात्र जालबन्धनविधौ दोषमाशङ्क्यात्मन्यवज्ञा न कर्तव्या। यतः।

---

=ವ್ಯತ್ಯಾಸವು, ಇದೆ. ಶರೀರಂ=ದೇಹವು, ಕ್ಷಣವಿಧ್ವಂಸಿ=ಸ್ವಲ್ಪಹೊತ್ತಿನಲ್ಲಿಯೇ ನಾಶವಾಗುವುದು. ಗುಣಾಃ=ಗುಣಗಳು, ಕಲ್ಪಾಂತ=ಪ್ರಳಯಕಾಲದವರೆಗೆ, ಸ್ಥಾಯಿನಃ=ಇರುವುವು.

ತಾ|| ದೇಹಕ್ಕೂ, ಗುಣಗಳಿಗೂ ಬಹಳ ವ್ಯತ್ಯಾಸವಿದೆ. ದೇಹವು ಸ್ವಲ್ಪ ಸಮಯದಲ್ಲಿಯೇ ನಾಶವಾಗುವುದು. ಗುಣಗಳು ಪ್ರಳಯಕಾಲದವರೆಗೆ ಶಾಶ್ವತವಾಗಿ ಇರುವುವು.

೭೯. ಅ|| ಹಿರಣ್ಯಕಃ=ಹಿರಣ್ಯಕನು, ಇತಿ=ಈರೀತಿ, ಆಕರ್ಣ್ಯ=ಕೇಳಿ, ಪ್ರಹೃಷ್ಟಮನಾಃ=ಸಂತೋಷಗೊಂಡ ಮನಸ್ಸುಳ್ಳದ್ದಾಗಿ, ಪುಲಕಿತಃ ಸನ್=ರೋಮಾಂಚಗೊಂಡದ್ದಾಗಿ, ಅಬ್ರವೀತ್—ಹೇಳಿತು. ಮಿತ್ರ=ಸ್ನೇಹಿತನೆ, ಸಾಧು, ಸಾಧು=ಒಳ್ಳೆದು ಒಳ್ಳೆದು. ಅನೇನ=ಈ, ಆಶ್ರಿತವಾತ್ಸಲ್ಯೇನ = ಆಶ್ರಯಿಸಿದವರಲ್ಲಿರುವ ಪ್ರೀತಿಯಿಂದ, ತ್ವಯಿ = ನಿನ್ನಲ್ಲಿ, ತ್ರೈಲೋಕ್ಯಸ್ಯ=ಮೂರು ಲೋಕಗಳ, ಪ್ರಭುತ್ವಂ ಅಪಿ=ಸ್ವಾಮಿತನವೂ, ಯುಜ್ಯತೇ=ಯುಕ್ತವಾಗುತ್ತದೆ. ಏವಂ=ಹೀಗೆ, ಉಕ್ತ್ವಾ=ಹೇಳಿ, ತೇನ=ಆ ಹಿರಣ್ಯಕನಿಂದ, ಸರ್ವೇಷಾಂ=ಎಲ್ಲಾ ಹಕ್ಕಿಗಳ, ಬಂಧನಾನಿ=ಕಟ್ಟುಗಳು, ಛಿನ್ನಾನಿ=ಕಡಿಯಲ್ಪಟ್ಟುವು. ತತಃ=ಬಳಿಕ, ಹಿರಣ್ಯಕಃ=ಹಿರಣ್ಯಕನು, ಸರ್ವಾನ್=ಎಲ್ಲಾ ಹಕ್ಕಿಗಳನ್ನು, ಸಾದರಂ=ಪ್ರೀತಿಯಿಂದ ಸಹಿತವಾಗಿ, ಸಂಪೂಜ್ಯ=ಪೂಜಿಸಿ, ಆಹ=ಹೇಳಿತು. ಸಖೇ=ಸ್ನೇಹಿತನಾದ, ಚಿತ್ರಗ್ರೀವ=ಚಿತ್ರಗ್ರೀವನೆ! ಸರ್ವಥಾ=ಎಲ್ಲಾ ವಿಧದಿಂದಲೂ, ಅತ್ರ=ಈ, ಜಾಲಬಂಧನವಿಧೌ=ಬಲೆಯ ಕಟ್ಟಿನ ವಿಷಯದಲ್ಲಿ, ದೋಷಂ=

೮೦. योऽधिकाद्योजनशतात्पश्यतीहामिषं खगः ।
स एव प्राप्तकालस्तु पाशबन्धं न पश्यति ॥ ५० ॥

೮೧. अपरं च ।

शशिदिवाकरयोर्ग्रहपीडनं
गजभुजङ्गमयोरपि बन्धनम् ।
मतिमतां च विलोक्य दरिद्रतां
विधिरहो बलवानिति मे मतिः ॥ ५१ ॥

---

ಕೆಡಕನ್ನು, ಆಶಂಕ್ಯ = ಊಹಿಸಿ, ಆತ್ಮನಿ = ನಿನ್ನಲ್ಲಿ, ಅವಜ್ಞಾ = ಅವಮಾನವು, ನ ಕರ್ತವ್ಯಾ = ಮಾಡಕೂಡದು. ಯತಃ = ಯಾವ ಕಾರಣದಿಂದ,

೮೦. ಅ॥ ಯಃ = ಯಾವ, ಖಗಃ = ಪಕ್ಷಿಯು, ಅಧಿಕಾತ್ = ಹೆಚ್ಚಾದ, ಯೋಜನಶತಾತ್ = ನೂರು ಗಾವುದಗಳಿಂದ, ಇಹ = ಈ ಭೂಮಿಯಲ್ಲಿ, ಆಮಿಷಂ = ತಿನ್ನುವ ವಸ್ತುವನ್ನು (ಮಾಂಸವನ್ನು), ಪಶ್ಯತಿ = ನೋಡುವುದೊ, ಪ್ರಾಪ್ತಕಾಲಃ = ಹೊಂದಲ್ಪಟ್ಟ ಮೃತ್ಯುವುಳ್ಳ, ಸ ಏವ = ಅದೇ, ಪಾಶಬಂಧಂ = ಹಗ್ಗದ ಕಟ್ಟನ್ನು, ನ ಪಶ್ಯತಿ = ನೋಡುವುದಿಲ್ಲ.

ತಾ॥ ನೂರು ಗ್ರಾವುದಗಳ ದೂರದಲ್ಲಿ ಆಕಾಶದಲ್ಲಿ ಹಾರುತ್ತ ಭೂಮಿಯಲ್ಲಿರುವ ತಿನ್ನುವ ವಸ್ತುವನ್ನು ನೋಡುವ ಗಿಡಗವೂ ಮೃತ್ಯುವಶದಿಂದ ಹಗ್ಗದ ಕಟ್ಟನ್ನು ಅರಿಯದೆ ಅದರ ಬಂಧನಕ್ಕೆ ಒಳಗಾಗುವುದು.

೮೧. ಅ॥ ಅಪರಂ ಚ, ಶಶಿದಿವಾಕರಯೋಃ = ಚಂದ್ರಸೂರ್ಯರಿಗೆ, ಗ್ರಹಪೀಡನಂ = ರಾಹುಕೇತು ಗ್ರಹಗಳಿಂದ ಬಾಧೆಯನ್ನು, ಗಜ = ಆನೆ, ಭುಜಂಗಮಯೋಃ ಅಪಿ = ಹಾವು ಇವುಗಳಿಗೂ, ಬಂಧನಂ = ಕಟ್ಟುವಿಕೆಯನ್ನು, ಮತಿಮತಾಂ = ವಿದ್ವಾಂಸರ, ದರಿದ್ರತಾಂ ಚ = ಬಡತನವನ್ನೂ, ವಿಲೋಕ್ಯ = ನೋಡಿ, ವಿಧಿಃ = ಅದೃಷ್ಟವು, ಬಲವಾನ್ = ಬಲಿಷ್ಠವಾದುದು, ಇತಿ = ಹೀಗೆಂದು, ಮೇ = ನನ್ನ, ಬುದ್ಧಿಃ = ಜ್ಞಾನವು, ಅಹೋ = ಆಶ್ಚರ್ಯ.

अन्यच्च ।

೮೨. व्योमैकान्तविहारिणोऽपि विहगाः सम्प्राप्नुवन्त्यापदं
बध्यन्ते निपुणैरगाधसलिलान्मत्स्याः समुद्रादपि ॥
दुर्नीतं किमिहास्ति किं सुचरितं कः स्थानलाभे गुणः
कालो हि व्यसनप्रसारितकरो गृह्णाति दूरादपि ॥५२॥

---

ತಾ॥ ಚಂದ್ರಸೂರ್ಯರು ಜಗತ್ಪ್ರಕಾಶಕರಾದರೂ ಅವರಿಗೆ ರಾಹುಕೇತುಗಳಿಂದ ಗ್ರಹಣವುಂಟಾಗುವುದು. ಅತಿ ಬಲವುಳ್ಳ ಆನೆ, ಕ್ರೂರವಾದ ನಾಗರಹಾವು ಇವುಗಳನ್ನೂ ಹಿಡಿದು ಬಂಧನದಲ್ಲಿಡುವರು. ವಿದ್ವಾಂಸರೂ ಜೀವನಕ್ಕಿಲ್ಲದೆ ಬಡತನದಿಂದ ಕಷ್ಟಪಡುವರು. ಇದನ್ನು ನೋಡಿದರೆ ವಿಧಿಯು ಬಲಿಷ್ಠವಾದುದೆಂದು ನಾನು ತಿಳಿಯುತ್ತೇನೆ.

೮೨. ಅ॥ ವಿಹಗಾಃ = ಪಕ್ಷಿಗಳು, ವ್ಯೋಮ = ಆಕಾಶದ, ಏಕಾಂತ = ಯಾವುದೋ ಒಂದು ಕಡೆ, ವಿಹಾರಿಣಃ ಅಪಿ = ಹಾರಾಡುತ್ತಿರುವವುಗಳಾದರೂ, ಆಪದಂ = ವಿಪತ್ತನ್ನು, ಸಂಪ್ರಾಪ್ನುವಂತಿ = ಹೊಂದುತ್ತವೆ. ನಿಪುಣೈಃ = ಬುದ್ಧಿಶಾಲಿಗಳಿಂದ, ಅಗಾಧಸಲಿಲಾತ್ = ಆಳವಾದ ನೀರುಳ್ಳ, ಸಮುದ್ರಾತ್ ಅಪಿ = ಸಮುದ್ರದಿಂದಲೂ, ಮತ್ಸ್ಯಾಃ = ಮೀನುಗಳು, ಬಧ್ಯಂತೇ = ಕಟ್ಟಲ್ಪಡುತ್ತವೆ. ಇಹ = ಈ ಲೋಕದಲ್ಲಿ, ಕಿಂ = ಯಾವ, ದುರ್ನೀತಂ = ದುಶ್ಚೇಷ್ಟೆಯು (ಕೆಟ್ಟಕೆಲಸವು), ಕಿಂ ಸುಕೃತಂ = ಯಾವ ಪುಣ್ಯವು, ಅಸ್ತಿ = ಇದೆ. ಸ್ಥಾನಲಾಭೇ = ಪದವಿಯನ್ನು ಪಡೆದುದರಲ್ಲಿ, ಗುಣಃ = ಗುಣವು, ಕಃ = ಯಾವುದು ? ವ್ಯಸನ = ದುಃಖಗಳಲ್ಲಿ, ಪ್ರಸಾರಿತ = ಚಾಚಲ್ಪಟ್ಟ, ಕರಃ = ಕೈಯುಳ್ಳ, ಕಾಲಃ = ಯಮನು, ದೂರಾತ್ ಅಪಿ = ದೂರದಿಂದಲೂ, ಗೃಹ್ಣಾತಿ = ಹಿಡಿಯುತ್ತಾನೆ.

ತಾ॥ ಆಕಾಶದ ಯಾವುದೋ ಒಂದು ಕಡೆಯಲ್ಲಿ ಸಂಚರಿಸುವ ಹಕ್ಕಿಗಳಿಗೂ ಕಷ್ಟವು ಒದಗುವುದು. ಆಳವಾದ ಮಡುವುಳ್ಳ ಸಮುದ್ರದಿಂದಲೂ ಜಾಣರಾದ ಬೆಸ್ತರು ಮೀನುಗಳನ್ನು ಹಿಡಿಯುತ್ತಾರೆ. ಈ ಪ್ರಪಂಚದಲ್ಲಿ ಒಳ್ಳೆದೂ

೮೩. इति प्रबोध्यातिथ्यं कृत्वालिङ्ग्य च चित्रग्रीवस्तेन सम्प्रेषितो यथेष्टदेशान् सपरिवारो ययौ । हिरण्यकोऽपि स्वविवरं प्रविष्टः ।

೮೪. यानि कानि च मित्राणि कर्तव्यानि शतानि च ।
पश्य मूषकमित्रेण कपोता मुक्तबन्धनाः ॥ ५३ ॥

೮೫. अथ लघुपतनकनामा काकः सर्ववृत्तान्तदर्शी साश्चर्यमिदमाह— 'अहो हिरण्यक श्लाघ्योऽसि । अतोऽहमपि त्वया सह मैत्रीमिच्छामि ।

---

ಕೆಟ್ಟದೂ ಒಂದೇ. ಉತ್ತಮವಾದ ಪದವಿಯನ್ನು ಪಡೆದರೂ ಪ್ರಯೋಜನ ವಿಲ್ಲ. ದುಃಖವನ್ನುಂಟು ಮಾಡುವುದರಲ್ಲಿಯೇ ಕೈಯನ್ನು ಚಾಚಿರುವ ಮೃತ್ಯುವು ದೂರದಿಂದಲೂ ಹಿಡಿದು ಕೊಲ್ಲುವುದು.

೮೩. ಅ॥ ಇತಿ = ಹೀಗೆಂದು, ತೇನ = ಆ ಇಲಿಯಿಂದ, ಪ್ರಬೋಧ್ಯ = ಎಚ್ಚರಿಸಿ, ಆತಿಥ್ಯಂ = ಅತಿಥಿಸತ್ಕಾರವನ್ನು, ಕೃತ್ವಾ = ಮಾಡಿ, ಚ = ಮತ್ತು, ಆಲಿಂಗ್ಯ = ತಬ್ಬಿಕೊಂಡು, ಸಂಪ್ರೇಷಿತಃ = ಕಳುಹಿಸಲ್ಪಟ್ಟ, ಚಿತ್ರಗ್ರೀವಃ = ಚಿತ್ರಗ್ರೀವನು, ಸಪರಿವಾರಃ = ಪರಿವಾರದಿಂದ ಸಹಿತವಾಗಿ, ಯಥೇಷ್ಟ-ದೇಶಾನ್ = ತನಗಿಷ್ಟವಾದ ಸ್ಥಳಗಳಿಗೆ, ಯಯೌ = ಹೋಯಿತು. ಹಿರಣ್ಯಕಃ ಅಪಿ = ಹಿರಣ್ಯಕನೂ, ಸ್ವವಿವರಂ = ತನ್ನ ಬಿಲವನ್ನು, ಪ್ರವಿಷ್ಟಃ = ಹೊಕ್ಕಿತು.

೮೪. ಅ॥ ಶತಾನಿ = ನೂರು, ಯಾನಿ ಕಾನಿ = ಯಾರು ಯಾರು ಆದರೂ, ಮಿತ್ರಾಣಿ = ಸ್ನೇಹಿತರು, ಕರ್ತವ್ಯಾನಿ = ಮಾಡತಕ್ಕವರು. ಪಶ್ಯ = ನೋಡು. ಮೂಷಕಮಿತ್ರೇಣ = ಇಲಿಯೆಂಬ ಸ್ನೇಹಿತನಿಂದ, ಕಪೋತಾಃ = ಪಾರಿವಾಳ ಗಳು, ಮುಕ್ತಬಂಧನಾಃ = ಬಿಡಲ್ಪಟ್ಟ ಕಟ್ಟುಳ್ಳವಾದುವು.

ತಾ॥ ಯಾರೇ ಆಗಲಿ ಅನೇಕ ಮಂದಿಗಳನ್ನು ಮಿತ್ರರನ್ನಾಗಿ ಮಾಡಿ ಕೊಳ್ಳಬೇಕು. ನೋಡು ಚಿತ್ರಗ್ರೀವವು ಇಲಿಯನ್ನು ಮಿತ್ರನನ್ನಾಗಿ ಮಾಡಿ ಕೊಂಡಿದ್ದರಿಂದ ತನ್ನ ಪರಿವಾರದವರನ್ನು ಬಿಡಿಸಲು ಸಾಧ್ಯವಾಯಿತು.

೮೫. ಅ॥ ಅಥ = ಬಳಿಕ, ಲಘುಪತನಕನಾಮಾ = ಲಘುಪತನಕನೆಂಬ,

अतो मां मैत्र्येणानुग्रहीतुमर्हसि' एतत् श्रुत्वा हिरण्यकोऽपि विवराभ्यन्तरादाह—'कस्त्वम्' स ब्रूते—'लघुपतनकनामा वायसोऽहम्' हिरण्यको विहस्याह—'का त्वया सह मैत्री । यतः ।

೫೪. यद्येन युज्यते लोके बुधस्तत्तेन योजयेत् ।
अहमन्नं भवान्भोक्ता कथं प्रीतिर्भविष्यति ॥ ५४ ॥

---

ಕಾಕಃ = ಕಾಗೆಯು, ಸರ್ವ = ಎಲ್ಲಾ, ವೃತ್ತಾಂತ = ಕಪೋತಗಳ ಸಮಾಚಾರವನ್ನು, ದರ್ಶೀ = ನೋಡತಕ್ಕದ್ದಾಗಿ, ಸಾಶ್ಚರ್ಯಂ = ಆಶ್ಚರ್ಯದಿಂದ ಸಹಿತವಾಗಿ, ಇದಂ = ಈ ಮಾತನ್ನು, ಆಹ = ಹೇಳಿತು. ಅಹೋ = ಆಶ್ಚರ್ಯ. ಹಿರಣ್ಯಕ = ಹಿರಣ್ಯಕನೆ, ಶ್ಲಾಘ್ಯಃ = ಹೊಗಳಲು ಯೋಗ್ಯನು, ಅಸಿ = ಆಗಿದ್ದೀಯೆ. ಅತಃ = ಈ ಕಾರಣದಿಂದ, ಅಹಂ ಅಪಿ = ನಾನೂ, ತ್ವಯಾ ಸಹ = ನಿನ್ನೊಡನೆ, ಮೈತ್ರೀಂ = ಸ್ನೇಹವನ್ನು, ಇಚ್ಛಾಮಿ = ಅಪೇಕ್ಷಿಸುತ್ತೇನೆ. ಅತಃ = ಈ ಕಾರಣದಿಂದ, ಮಾಂ = ನನ್ನನ್ನು, ಮೈತ್ರ್ಯೇಣ = ಸ್ನೇಹದಿಂದ, ಅನುಗ್ರಹೀತುಂ = ಅನುಗ್ರಹಮಾಡಲು, ಅರ್ಹಸಿ = ಯೋಗ್ಯನಾಗಿರುವಿ.

ಅ॥ ಏತತ್ = ಇದನ್ನು, ಶ್ರುತ್ವಾ = ಕೇಳಿ, ಹಿರಣ್ಯಕಃ ಅಪಿ = ಹಿರಣ್ಯಕನೂ, ವಿವರಾಭ್ಯಂತರಾತ್ = ಬಿಲದೊಳಗಿನಿಂದ, ಆಹ = ಹೇಳಿತು. ತ್ವಂ = ನೀನು, ಕಃ = ಯಾರು ? ಸಃ = ಅದು, ಬ್ರೂತೇ = ಹೇಳುತ್ತದೆ. ಅಹಂ = ನಾನು, ಲಘುಪತನಕನಾಮಾ = ಲಘುಪತನಕನೆಂದು ಹೆಸರುಳ್ಳ, ವಾಯಸಃ = ಕಾಗೆಯು. ಹಿರಣ್ಯಕಃ, ವಿಹಸ್ಯ = ನಕ್ಕು, ಆಹ = ಹೇಳುತ್ತದೆ. ತ್ವಯಾ = ನಿನ್ನಿಂದ, ಸಹ = ಕೂಡಿ, ಮೈತ್ರೀ = ಸ್ನೇಹವು, ಕಾ = ಯಾವುದು ? ಯತಃ = ಯಾವ ಕಾರಣದಿಂದ,

೫೪. ಅ॥ ಲೋಕೇ = ಪ್ರಪಂಚದಲ್ಲಿ, ಯತ್ = ಯಾವುದು, ಯೇನ = ಯಾವುದರಿಂದ, ಯುಜ್ಯತೇ = ಯೋಗ್ಯವಾಗುವುದೊ, ಬುಧಃ = ಪಂಡಿತನು, ತತ್ = ಅದನ್ನು, ತೇನ = ಅದರಿಂದ, ಯೋಜಯೇತ್ = ಸೇರಿಸಬೇಕು. ಅಹಂ = ನಾನು, ಅನ್ನಂ = ತಿನ್ನುವ ವಸ್ತು. ಭವಾನ್ = ನೀನು, ಭೋಕ್ತಾ

೮೭. अपरं च ।

**भक्ष्यभक्षकयोः प्रीतिर्विपत्तेरेव कारणम् ।**
**शृगालात्पाशबद्धोऽसौ मृगः काकेन रक्षितः' ॥ ५५ ॥**

೮೮. वायसोऽब्रवीत्–'कथमेतत्' । हिरण्यकः कथयति—

---

=ತಿನ್ನುವವನು. ಪ್ರೀತಿಃ=ಸ್ನೇಹವು, ಕಥಂ=ಹೇಗೆ, ಭವಿಷ್ಯತಿ=ಆಗುವುದು ?

ತಾ॥ ಪ್ರಪಂಚದಲ್ಲಿ ವಿದ್ವಾಂಸನು ಯಾವುದು ಯಾವುದರೊಡನೆ ಸೇರಲು ಯೋಗ್ಯವಾದುದೊ ಅದನ್ನು ಅದರೊಡನೆ ಸೇರಿಸಬೇಕು. ನಾನು ನಿನಗೆ ತಿನ್ನಲು ಯೋಗ್ಯವಾದ ವಸ್ತುವು. ನೀನು ತಿನ್ನುವವನು. ನಮ್ಮಿಬ್ಬರಲ್ಲಿ ಸ್ನೇಹವು ಹೇಗೆ ಉಂಟಾಗುವುದು ?

೮೭ ಅ॥ ಅಪರಂ ಚ=ಮತ್ತೂ, ಭಕ್ಷ್ಯ=ತಿನ್ನುವ ವಸ್ತು, ಭಕ್ಷಕಯೋಃ =ತಿನ್ನತಕ್ಕ ಪ್ರಾಣಿ ಇವುಗಳ, ಪ್ರೀತಿಃ=ಸ್ನೇಹವು, ವಿಪತ್ತೇಃ ಏವ= ಆಪತ್ತಿಗೇನೆ, ಕಾರಣಂ=ಕಾರಣವಾಗುವುದು. ಶೃಗಾಲಾತ್=ನರಿಯಿಂದ, ಪಾಶಬದ್ಧಃ=ಹಗ್ಗದಿಂದ ಕಟ್ಟಲ್ಪಟ್ಟ, ಅಸೌ=ಈ, ಮೃಗಃ=ಜಿಂಕೆಯು, ಕಾಕೇನ=ಕಾಗೆಯಿಂದ, ರಕ್ಷಿತಃ=ಕಾಪಾಡಲ್ಪಟ್ಟಿತು.

ತಾ॥ ತಿನ್ನತಕ್ಕ ವಸ್ತು ತಿನ್ನುವ ಪ್ರಾಣಿ ಇವುಗಳಿಗಾದ ಸ್ನೇಹವು ಆಪತ್ತನ್ನೇ ಉಂಟು ಮಾಡುವುದು. ಭಕ್ಷಿಸುವ ನರಿಯಿಂದ ತಿನ್ನುವ ವಸ್ತುವಾದ ಜಿಂಕೆಯು ಹಗ್ಗದಿಂದ ಕಟ್ಟಲ್ಪಟ್ಟದ್ದಾಗಿ ಕಾಗೆಯಿಂದ ರಕ್ಷಿಸಲ್ಪಟ್ಟದೆ.

೮೮ ಅ॥ ವಾಯಸಃ=ಕಾಗೆಯು, ಅಬ್ರವೀತ್=ಹೇಳಿತು. ಏತತ್= ಇದು, ಕಥಂ=ಹೇಗೆ ? ಹಿರಣ್ಯಕಃ, ಕಥಯತಿ=ಹೇಳುತ್ತದೆ.

## कथा २

१. 'अस्ति मगधदेशे चम्पकवती नामारण्यानी । तस्यां चिरान्महता स्नेहेन मृगकाकौ निवसतः । स च मृगः स्वेच्छया भ्राम्यन् हृष्टपुष्टाङ्गः केनचित् शृगालेनावलोकितः । तं दृष्ट्वा शृगालोऽचिन्तयत्—

'आः कथमेतन्मांसं सुललितं भक्षयामि । भवतु । विश्वासं तावदुत्पादयामि ।' इत्यालोच्योपसृत्याब्रवीत् । 'मित्र कुशलं ते ।' मृगेणोक्तं—'कस्त्वम् ।'स ब्रूते—'क्षुद्रबुद्धिनामा जम्बुकोऽहम् । अत्रारण्ये बन्धुहीनो मृतवन्निवसामि । इदानीं त्वां मित्रमासाद्य पुनः सबन्धुर्जीव-

---

### ಎರಡನೆ ಕಥೆ

೧. ಅ॥ ಮಗಧದೇಶೇ=ಮಗಧ ದೇಶದಲ್ಲಿ, ಚಂಪಕವತೀ ನಾಮ=ಚಂಪಕವತಿಯೆಂಬ, ಅರಣ್ಯಾನೀ=ದೊಡ್ಡ ಕಾಡು, ಅಸ್ತಿ=ಇದೆ. ತಸ್ಯಾಂ=ಆ ಕಾಡಿನಲ್ಲಿ, ಮೃಗಕಾಕೌ=ಜಿಂಕೆ ಕಾಗೆಗಳು, ಚಿರಾತ್=ಬಹಳ ಕಾಲದಿಂದ, ಮಹತಾ ಸ್ನೇಹೇನ=ಹೆಚ್ಚಾದ ಸ್ನೇಹದಿಂದ, ನಿವಸತಃ=ವಾಸ ಮಾಡಿಕೊಂಡಿವೆ. ಸ್ವೇಚ್ಛಯಾ=ತನ್ನ ಅಪೇಕ್ಷೆಯಂತೆ, ಭ್ರಾಮ್ಯನ್=ಅಲೆಯುತ್ತಿದ್ದ, ಹೃಷ್ಟಪುಷ್ಟಾಂಗಃ=ಸಂತೋಷದಿಂದ ಪುಷ್ಟಿಗೊಂಡ, ಸಃ ಚ ಮೃಗಃ=ಆ ಜಿಂಕೆಯೂ, ಕೇನಚಿತ್=ಯಾವುದೊ ಒಂದು, ಶೃಗಾಲೇನ=ನರಿಯಿಂದ, ಅವಲೋಕಿತಃ=ನೋಡಲ್ಪಟ್ಟಿತು. ಶೃಗಾಲಃ, ತಂ=ಅದನ್ನು, ದೃಷ್ಟ್ವಾ=ನೋಡಿ, ಅಚಿಂತಯತ್=ಆಲೋಚಿಸಿತು. 'ಆಃ=ಅಹಹ, ಸುಲಲಿತಂ=ಚೆನ್ನಾಗಿರುವ, ಏತನ್ಮಾಂಸಂ=ಈ ಜಿಂಕೆಯ ಮಾಂಸವನ್ನು, ಕಥಂ=ಹೇಗೆ, ಭಕ್ಷಯಾಮಿ=ತಿನ್ನುವೆನು. ಭವತು=ಇರಲಿ. ತಾವತ್=ಮೊದಲು, ವಿಶ್ವಾಸಂ=ನಂಬಿಕೆಯನ್ನು, ಉತ್ಪಾದಯಾಮಿ=ಉಂಟು ಮಾಡುತ್ತೇನೆ.' ಇತಿ=ಹೀಗೆ, ಆಲೋಚ್ಯ=ಚಿಂತಿಸಿ, ಉಪಸೃತ್ಯ=ಸಮೀಪಿಸಿ, ಅಬ್ರವೀತ್=ಹೇಳಿತು. ಮಿತ್ರ=ಸ್ನೇಹಿತನೆ, ತೇ=ನಿನಗೆ, ಕುಶಲಂ=ಕ್ಷೇಮವೊ? ಮೃಗೇಣ=ಜಿಂಕೆಯಿಂದ, ಉಕ್ತಂ=ಹೇಳಲ್ಪಟ್ಟಿತು.

लोकं प्रविष्टोऽस्मि । अधुना तवानुचरेण मया सर्वथा भवितव्यम् ।' मृगेणोक्तम्—'एवमस्तु ।' ततः पश्चादस्तंगते सवितरि भगवति मरीचिमालिनि तौ मृगस्य वासभूमिं गतौ । तत्र चम्पकवृक्षशाखायां सुबुद्धिनामा काको मृगस्य चिरमित्रं निवसति । तौ दृष्ट्वा काकोऽवदत्—'सखे चित्राङ्ग, कोऽयं द्वितीयः ।' मृगो ब्रूते 'जम्बुकोऽयम् । अस्मत्सख्यमिच्छन्नागतः' काको ब्रूते—'मित्र, अकस्मादागन्तुना सह मैत्री न युक्ता । तथा चोक्तम्—

---

ತ್ವಂ = ನೀನು, ಕಃ = ಯಾರು ? ಸಃ ಬ್ರೂತೇ = ಆ ನರಿಯು ಹೇಳುತ್ತದೆ. ಅಹಂ = ನಾನು, ಕ್ಷುದ್ರಬುದ್ಧಿನಾಮಾ = ಕ್ಷುದ್ರಬುದ್ಧಿಯೆಂದು ಹೆಸರುಳ್ಳ, ಜಂಬುಕಃ = ನರಿಯು. ಅತ್ರ = ಈ, ಅರಣ್ಯೇ = ಕಾಡಿನಲ್ಲಿ, ಬಂಧುಹೀನಃ = ಬಂಧುಗಳಿಲ್ಲದವನಾಗಿ, ಮೃತವತ್ = ಸತ್ತವನಂತೆ, ನಿವಸಾಮಿ = ವಾಸ ಮಾಡುತ್ತೇನೆ. ಇದಾನೀಂ = ಈಗ, ಮಿತ್ರಂ ತ್ವಾಂ = ಸ್ನೇಹಿತನಾದ ನಿನ್ನನ್ನು, ಆಸಾದ್ಯ = ಹೊಂದಿ, ಪುನಃ = ತಿರುಗಿ, ಸಬಂಧುಃ = ಬಂಧುವಿನಿಂದ ಸಹಿತನಾಗಿ, ಜೀವಲೋಕಂ = ಪ್ರಪಂಚವನ್ನು, ಪ್ರವಿಷ್ಟಃ ಅಸ್ಮಿ = ಹೊಕ್ಕಿರುತ್ತೇನೆ. ಅಧುನಾ = ಈಗ, ಮಯಾ = ನನ್ನಿಂದ, ತವ = ನಿನ್ನ, ಅನುಚರೇಣ = ಸೇವಕನಿಂದ, ಸರ್ವಥಾ = ಎಲ್ಲಾ ರೀತಿಯಿಂದಲೂ, ಭವಿತವ್ಯಂ = ಆಗಿರತಕ್ಕದ್ದು, ಮೃಗೇಣ = ಜಿಂಕೆಯಿಂದ, ಉಕ್ತಂ = ಹೇಳಲ್ಪಟ್ಟಿತು. ಏವಂ ಅಸ್ತು = ಹೀಗೆಯೇ ಆಗಲಿ. ತತಃ ಪಶ್ಚಾತ್ = ಆ ಅನಂತರ, ಭಗವತಿ = ಪೂಜ್ಯನಾದ, ಮರೀಚಿಮಾಲಿನಿ = ಕಾಂತಿಯ ಸಮೂಹವುಳ್ಳ, ಸವಿತರಿ = ಸೂರ್ಯನು, ಅಸ್ತಂಗತೇ = ಮುಳುಗಲು, ತೌ = ಆ ನರಿ ಜಿಂಕೆಗಳು, ಮೃಗಸ್ಯ = ಜಿಂಕೆಯ, ವಾಸಭೂಮಿಂ = ವಾಸಸ್ಥಳಕ್ಕೆ, ಗತೌ = ಹೋದುವು. ತತ್ರ = ಅಲ್ಲಿ, ಚಂಪಕವೃಕ್ಷಶಾಖಾಯಾಂ = ಸಂಪಿಗೆ ಮರದ ಕೊಂಬೆಯಲ್ಲಿ, ಮೃಗಸ್ಯ = ಜಿಂಕೆಯ, ಚಿರಮಿತ್ರಂ = ಬಹಳ ಕಾಲದ ಸ್ನೇಹಿತನಾದ, ಸುಬುದ್ಧಿನಾಮಾ = ಸುಬುದ್ಧಿಯೆಂದು ಹೆಸರುಳ್ಳ, ಕಾಕಃ = ಕಾಗೆಯು, ನಿವಸತಿ = ವಾಸ ಮಾಡುತ್ತಿದೆ. ಕಾಕಃ = ಕಾಗೆಯು, ತೌ = ಆ ನರಿ ಜಿಂಕೆಗಳನ್ನು, ದೃಷ್ಟ್ವಾ

१. अज्ञातकुलशीलस्य वासो देयो न कस्यचित् ।
मार्जारस्य हि दोषेण हतो गृध्रो जरद्गवः' ॥ ५६ ॥

२. तावाहतुः—'कथमेतत्' काकः कथयति—

कथा ३

१. 'अस्ति भागीरथीतीरे गृध्रकूटनाम्नि पर्वते महापर्कटीवृक्षः । तस्य

---

=ನೋಡಿ, ಅವದತ್ = ಹೇಳಿತು. ಸಖೇ = ಸ್ನೇಹಿತನಾದ, ಚಿತ್ರಾಂಗ = ಚಿತ್ರಾಂಗನೆ, ಅಯಂ = ಈ, ದ್ವಿತೀಯಃ = ಎರಡನೆಯವನು, ಕಃ = ಯಾವನು ? ಮೃಗಃ = ಮೃಗವು, ಬ್ರೂತೇ = ಹೇಳುತ್ತದೆ. ಜಂಬುಕಃ = ನರಿಯಾದ, ಅಯಂ = ಇದು, ಅಸ್ಮತ್ಸಖ್ಯಂ = ನನ್ನ ಸ್ನೇಹವನ್ನು, ಇಚ್ಛನ್ = ಅಪೇಕ್ಷಿಸುತ್ತ, ಆಗತಃ = ಬಂದಿದೆ. ಕಾಕಃ = ಕಾಗೆಯು, ಬ್ರೂತೇ. ಮಿತ್ರ = ಸ್ನೇಹಿತನೆ, ಅಕಸ್ಮಾತ್ = ಯಾವ ಕಾರಣವೂ ಇಲ್ಲದೆ, ಆಗಂತುನಾ ಸಹ = ಬಂದವನೊಡನೆ, ಮೈತ್ರೀ = ಸ್ನೇಹವು, ನ ಯುಕ್ತಾ = ಯೋಗ್ಯವಲ್ಲ. ತಥಾ ಚ = ಹಾಗೆಯೇ, ಉಕ್ತಂ = ಹೇಳಲ್ಪಟ್ಟದೆ.

೨. ಅ॥ ಅಜ್ಞಾತ = ತಿಳಿಯಲ್ಪಡದ, ಕುಲ = ವಂಶ, ಶೀಲಸ್ಯ = ಸ್ವಭಾವ ಇವುಗಳುಳ್ಳ, ಕಸ್ಯಚಿತ್ = ಯಾವನಿಗೂ, ವಾಸಃ = ವಾಸಸ್ಥಳವು, ನ ದೇಯಃ = ಕೊಡಕೂಡದು. ಮಾರ್ಜಾರಸ್ಯ = ಬೆಕ್ಕಿನ, ದೋಷೇಣ = ದೋಷದಿಂದ, ಜರದ್ಗವಃ = ಜರದ್ಗವವೆಂಬ, ಗೃಧ್ರಃ = ಹದ್ದು, ಹತಃ = ಕೊಲ್ಲಲ್ಪಟ್ಟಿತು.

ತಾ॥ ವಂಶ ಮತ್ತು ಸ್ವಭಾವವನ್ನು ತಿಳಿಯದೆ ಯಾರಿಗೂ ವಾಸಕ್ಕೆ ಸ್ಥಳವನ್ನು ಕೊಡಕೂಡದು. ಹೀಗೆ ಅರಿಯದೆ ಕೊಟ್ಟದ್ದರಿಂದ ಬೆಕ್ಕಿನ ದೋಷದಿಂದ ಜರದ್ಗವವೆಂಬ ಹದ್ದು ಸತ್ತಿತು.

೩. ಅ॥ ತೌ = ಆ ನರಿ ಜಿಂಕೆಗಳು, ಆಹತುಃ = ಹೇಳುತ್ತವೆ. ಏತತ್ = ಇದು, ಕಥಂ = ಹೇಗೆ? ಕಾಕಃ = ಕಾಗೆಯು, ಕಥಯತಿ = ಹೇಳುತ್ತದೆ.

ಮೂರನೆ ಕಥೆ

೧. ಅ॥ ಭಾಗೀರಥೀತೀರೇ = ಗಂಗೆಯ ದಡದಲ್ಲಿ, ಗೃಧ್ರಕೂಟನಾಮ್ನಿ =

**कोटरे दैवदुर्विपाकाद्गलितनखनयनो जरद्गवनामा गृध्रः प्रतिवसति । अथ कृपया तज्जीवनाय तद्वृक्षवासिनः पक्षिणः स्वाहारात्किञ्चित्किञ्चिदुद्धृत्य ददति । तेनासौ जीवति । अथ कदाचिद्दीर्घकर्णनामा मार्जारः पक्षिशावकान् भक्षितुं तत्रागतः । ततस्तमायान्तं दृष्ट्वा पक्षिशावकैर्भयार्तैः कोलाहलः कृतः । तत् श्रुत्वा जरद्गवेनोक्तम्—कोऽयमायाति ।' दीर्घकर्णो गृध्रमवलोक्य सभयमाह ' हा हतोऽस्मि । यतः ।**

---

ಗೃಧ್ರಕೂಟವೆಂದು ಹೆಸರುಳ್ಳ, ಪರ್ವತೇ = ಬೆಟ್ಟದಲ್ಲಿ, ಮಹಾ = ದೊಡ್ಡ, ಪರ್ಕಟೀವೃಕ್ಷಃ = ಪಣೆಯಾಲದಮರವು, ಅಸ್ತಿ = ಇದೆ. ತಸ್ಯ = ಆ ಮರದ, ಕೋಟರೇ = ಪೊಟರೆಯಲ್ಲಿ, ದೈವದುರ್ವಿಪಾಕಾತ್ = ಅದೃಷ್ಟದ ದುಷ್ಪರಿಣಾಮದಿಂದ, ಗಲಿತ = ಉದುರಿದ, ನಖ = ಉಗುರು, ನಯನಃ = ಕಣ್ಣು ಇವುಗಳುಳ್ಳ, ಜರದ್ಗವನಾಮಾ = ಜರದ್ಗವವೆಂಬ ಹೆಸರುಳ್ಳ, ಗೃಧ್ರಃ = ಹದ್ದು, ಪ್ರತಿವಸತಿ = ವಾಸಮಾಡುತ್ತಿದೆ. ಅಥ = ಬಳಿಕ, ತದ್ವೃಕ್ಷ = ಆ ಮರದಲ್ಲಿ, ವಾಸಿನಃ = ವಾಸಮಾಡುವ, ಪಕ್ಷಿಣಃ = ಹಕ್ಕಿಗಳು, ಕೃಪಯಾ = ದಯೆಯಿಂದ, ತಜ್ಜೀವನಾಯ = ಅದರ ಜೀವನಕ್ಕಾಗಿ, ಸ್ವಾಹಾರಾತ್ = ತಮ್ಮ ಆಹಾರದಿಂದ, ಕಿಂಚಿತ್ ಕಿಂಚಿತ್ = ಸ್ವಲ್ಪಸ್ವಲ್ಪವನ್ನು, ಉದ್ಧೃತ್ಯ = ತೆಗೆದು, ದದತಿ = ಕೊಡುತ್ತವೆ. ತೇನ = ಅದರಿಂದ, ಅಸೌ = ಈ ಹದ್ದು, ಜೀವತಿ = ಬದುಕುತ್ತದೆ. ಅಥ, ಕದಾಚಿತ್ = ಒಂದಾನೊಂದು ದಿನ, ದೀರ್ಘಕರ್ಣನಾಮಾ = ದೀರ್ಘಕರ್ಣನೆಂದು ಹೆಸರುಳ್ಳ, ಮಾರ್ಜಾರಃ = ಬೆಕ್ಕು, ಪಕ್ಷಿಶಾವಕಾನ್ = ಹಕ್ಕಿಮರಿಗಳನ್ನು, ಭಕ್ಷಿತುಂ = ತಿನ್ನುವುದಕ್ಕೆ, ತತ್ರ = ಆ ಮರಕ್ಕೆ, ಆಗತಃ = ಬಂದಿತು. ತತಃ = ಬಳಿಕ, ಆಯಾಂತಂ = ಬರುತ್ತಿರುವ, ತಂ = ಆ ಬೆಕ್ಕನ್ನು, ದೃಷ್ಟ್ವಾ = ನೋಡಿ, ಭಯಾರ್ತೈಃ = ಹೆದರಿಕೆಯಿಂದ ಪೀಡಿತರಾದ, ಪಕ್ಷಿಶಾವಕೈಃ = ಹಕ್ಕಿಮರಿಗಳಿಂದ, ಕೋಲಾಹಲಃ = ಗದ್ದಲವು, ಕೃತಃ = ಮಾಡಲ್ಪಟ್ಟಿತು. ತತ್ = ಅದನ್ನು, ಶ್ರುತ್ವಾ = ಕೇಳಿ, ಜರದ್ಗವೇನ = ಜರದ್ಗವದಿಂದ, ಉಕ್ತಂ = ಹೇಳಲ್ಪಟ್ಟಿತು. ಕಃ ಅಯಂ ಆಯಾತಿ = ಯಾವನಿವನು ಬರುತ್ತಿದ್ದಾನೆ. ದೀರ್ಘಕರ್ಣಃ = ದೀರ್ಘಕರ್ಣನೆಂಬ ಬೆಕ್ಕು,

१. तावद्भयस्य भेतव्यं यावद्भयमनागतम् ।
आगतं तु भयं वीक्ष्य नरः कुर्याद्यथोचितम् ॥ ५७ ॥

२. अधुनास्य सन्निधाने पलायितुमक्षमः । तद्यथा भवितव्यं तद्भवतु । तावद्विश्वासमुत्पाद्यास्य समीपमुपगच्छामि '। इत्यालोच्योपसृत्याब्रवीत्—'आर्य, त्वामभिवन्दे ।' गृध्रोऽवदत्—'कस्त्वम् ।' सोऽवदत्-'मार्जारोऽहम् ।' गृध्रो ब्रूते—दूरमपसर । नो चेद्धन्तव्योऽसि मया ।' मार्जारोऽवदत्—'श्रूयतां तावदस्मद्वचनम् । ततो यद्यहं वध्यस्तदा हन्तव्यः । यतः ।

---

ಗೃಧ್ರಂ=ಹದ್ದನ್ನು, ಅವಲೋಕ್ಯ=ನೋಡಿ, ಸಭಯಂ=ಹೆದರಿಕೆಯಿಂದ ಸಹಿತವಾಗಿ, ಆಹ=ಹೇಳುತ್ತದೆ. ಹಾ=ಅಯ್ಯೊ, ಹತಃ=ಸತ್ತವನು, ಅಸ್ಮಿ =ಆಗಿದ್ದೇನೆ. ಯತಃ=ಯಾವ ಕಾರಣದಿಂದ,

೧. ಅ॥ ಯಾವತ್=ಎಷ್ಟರಲ್ಲಿ, ಭಯಂ=ಹೆದರಿಕೆಯು, ಅನಾಗತಂ= ಬರಲಿಲ್ಲವೊ, ತಾವತ್=ಅಷ್ಟರಲ್ಲಿ, ಭಯಸ್ಯ=ಭಯವನ್ನುಂಟು ಮಾಡುವ ವಸ್ತುವಿನಿಂದ, ಭೇತವ್ಯಂ=ಹೆದರತಕ್ಕುದು. ಆಗತಂ=ಬಂದ, ಭಯಂ= ಹೆದರಿಕೆಯ ವಸ್ತುವನ್ನು, ವೀಕ್ಷ್ಯ ತು=ನೋಡಿಯಾದರೊ, ನರಃ=ಮನು ಷ್ಯನು, ಯಥೋಚಿತಂ=ಯೋಗ್ಯವಾದುದನ್ನು ಅನುಸರಿಸಿ, ಕುರ್ಯಾತ್= ಕೆಲಸ ಮಾಡಬೇಕು.

ತಾ॥ ಭಯವು ಸಮೀಪಿಸದಿರುವ ತನಕ ಆ ಭಯದಿಂದ ಹೆದರಬೇಕು. ಆದರೆ ಬಂದಿರುವ ಭಯವನ್ನು ನೋಡಿ ಮನುಷ್ಯನು ಆ ಸಮಯಕ್ಕೆ ಯೋಗ್ಯ ವಾದುದನ್ನು ಆಚರಿಸಬೇಕು.

೨. ಅ॥ ಅಧುನಾ=ಈಗ, ಅಸ್ಯ=ಈ ಹದ್ದಿನ, ಸನ್ನಿಧಾನೇ=ಹತ್ತಿರ ದಲ್ಲಿ, ಪಲಾಯಿತುಂ=ಓಡಲು, ಅಕ್ಷಮಃ=ಸಮರ್ಥನಾಗಿಲ್ಲ. ತತ್=ಆದ್ದ ರಿಂದ, ಯಥಾ=ಹೇಗೆ, ಭವಿತವ್ಯಂ=ಆಗಬೇಕೊ, ತತ್=ಅದು, ಭವತು= ಆಗಲಿ. ತಾವತ್=ಮೊದಲು, ವಿಶ್ವಾಸಂ=ನಂಬಿಕೆಯನ್ನು ಉತ್ಪಾದ್ಯ=

೪. जातिमात्रेण किं कश्चिद्धन्यते पूज्यते क्वचित् ।
व्यवहारं परिज्ञाय वध्यः पूज्योऽथवा भवेत् ॥ ೫೮ ॥

---

ಉಂಟುಮಾಡಿ, ಅಸ್ಯ=ಇದರ, ಸಮೀಪಂ=ಹತ್ತಿರಕ್ಕೆ, ಉಪಗಚ್ಛಾಮಿ= ಹೋಗುತ್ತೇನೆ. ಇತಿ, ಆಲೋಚ್ಯ=ಆಲೋಚಿಸಿ, ಉಪಸೃತ್ಯ=ಸಮೀಪಿಸಿ, ಅಬ್ರವೀತ್=ಹೇಳಿತು. ಆರ್ಯ=ಪೂಜ್ಯನೆ, ತ್ವಾಂ=ನಿನ್ನನ್ನು, ಅಭಿವಂದೇ =ನಮಸ್ಕಾರ ಮಾಡುತ್ತೇನೆ. ಗೃಧ್ರಃ=ಹದ್ದು, ಅವದತ್=ಹೇಳಿತು. ತ್ವಂ=ನೀನು, ಕಃ=ಯಾವನು? ಸಃ=ಆ ಬೆಕ್ಕು, ಅವದತ್=ಹೇಳಿತು. ಅಹಂ=ನಾನು, ಮಾರ್ಜಾರಃ=ಬೆಕ್ಕು. ಗೃಧ್ರಃ=ಹದ್ದು, ಬ್ರೂತೇ= ಹೇಳುತ್ತದೆ. ದೂರಂ=ದೂರ, ಅಪಸರ=ಸರಿ. ನೋ ಚೇತ್=ಇಲ್ಲ ದಿದ್ದರೆ, ಮಯಾ=ನನ್ನಿಂದ, ಹಂತವ್ಯಃ=ಕೊಲ್ಲಲು ಯೋಗ್ಯನು, ಅಸಿ= ಆಗಿದ್ದೀಯೆ. ಮಾರ್ಜಾರಃ, ಅವದತ್=ಹೇಳಿತು. ತಾವತ್=ಮೊದಲು, ಅಸ್ಮದ್ವಚನಂ=ನನ್ನ ಮಾತು, ಶ್ರೂಯತಾಂ=ಕೇಳಲ್ಪಡಲಿ. ತತಃ= ತರುವಾಯ, ಅಹಂ=ನಾನು, ವಧ್ಯಃ ಯದಿ=ಕೊಲ್ಲಲು ಯೋಗ್ಯನಾಗಿದ್ದರೆ, ತದಾ=ಆಗ, ಹಂತವ್ಯಃ=ಕೊಲ್ಲತಕ್ಕವನು. ಯತಃ=ಯಾವ ಕಾರಣ ದಿಂದ,

೪. ಅ॥ ಕಶ್ಚಿತ್=ಒಬ್ಬನು, ಕ್ವಚಿತ್=ಒಂದೆಡೆ, ಜಾತಿಮಾತ್ರೇಣ= ಜಾತಿಯಿಂದ ಮಾತ್ರವೇ, ಹನ್ಯತೇ ಕಿಂ=ಕೊಲ್ಲಲ್ಪಡುವನೋ? ಪೂಜ್ಯತೇ (ಕಿಂ)=ಪೂಜಿಸಲ್ಪಡುವನೋ? ವ್ಯವಹಾರಂ=ಮಾತಾಡುವುದನ್ನು, ಪರಿ ಜ್ಞಾಯ=ತಿಳಿದುಕೊಂಡು, ವಧ್ಯಃ=ಕೊಲ್ಲಲು ಯೋಗ್ಯನು, ಅಥ ವಾ= ಹಾಗಿಲ್ಲದಿದ್ದರೆ, ಪೂಜ್ಯಃ=ಪೂಜಿಸಲು ಯೋಗ್ಯನು, ಭವೇತ್=ಆದಾನು.

ತಾ॥ ಎಲ್ಲಿಯೂ ಯಾರನ್ನೂ ಜಾತಿಯಿಂದಲೇ ಕೆಟ್ಟವನೆಂದು ಕೊಲ್ಲುವು ದಿಲ್ಲ. ಅಥವಾ ಒಳ್ಳೆಯವನೆಂದು ಸನ್ಮಾನಿಸುವುದಿಲ್ಲ. ಅವನ ಮಾತುಗಳಿಂದ ನಡೆನುಡಿಗಳನ್ನರಿತು ಕೆಟ್ಟವನೆಂದು ತಿಳಿದರೆ ಕೊಲ್ಲುತ್ತಾರೆ. ಒಳ್ಳೆಯವನೆಂದು ತಿಳಿದರೆ ಪೂಜಿಸುತ್ತಾರೆ.

७. गृध्रो ब्रूते—'ब्रूहि किमर्थमागतोऽसि ।' सोऽवदत्—अहमत्र गङ्गातीरे नित्यस्नायी ब्रह्मचारी चान्द्रायणव्रतमाचरंस्तिष्ठामि । यूयं धर्मज्ञानरता विश्वासभूमय इति पक्षिणः सर्वे सर्वदा ममाग्रे प्रस्तुवन्ति । अतो भवद्भ्यो विद्यावयोवृद्धेभ्यो धर्मं श्रोतुमिहागतः । भवन्तश्चैतादृशा धर्मज्ञा यन्मामतिथिं हन्तुमुद्यताः । गृहस्थधर्मश्चैषः ।

---

೭. ಅ॥ ಗೃಧ್ರಃ ಬ್ರೂತೇ–ಬ್ರೂಹಿ=ಹೇಳು, ಕಿಮರ್ಥಂ=ಏತಕ್ಕೆ, ಆಗತಃ ಅಸಿ=ಬಂದಿರುವಿ ? ಸಃ=ಅದು, ಅವದತ್=ಹೇಳಿತು. ಅಹಂ= ನಾನು, ಅತ್ರ=ಇಲ್ಲಿ, ಗಂಗಾತೀರೇ=ಗಂಗಾನದಿಯ ದಡದಲ್ಲಿ, ನಿತ್ಯಸ್ನಾಯೀ =ನಿತ್ಯವೂ ಸ್ನಾನ ಮಾಡುವವನಾಗಿ, ಬ್ರಹ್ಮಚಾರೀ=ಬ್ರಹ್ಮಚಾರಿಯಾಗಿ, ಚಾಂದ್ರಾಯಣವ್ರತಂ=ಮೂವತ್ತು ದಿನಗಳು ಮಾಡುವ ವ್ರತವನ್ನು, ಆಚರನ್=ಆಚರಿಸುತ್ತ, ತಿಷ್ಠಾಮಿ=ಇರುತ್ತೇನೆ. ಧರ್ಮಜ್ಞಾನರತಾಃ= ಧರ್ಮ ಮತ್ತು ಜ್ಞಾನಗಳಲ್ಲಿ ಆಸಕ್ತರಾದ, ಯೂಯಂ=ನೀವು, ವಿಶ್ವಾಸ-ಭೂಮಯಃ ಇತಿ=ನಂಬಿಕೆಗೆ ವಿಷಯರು ಎಂದು, ಸರ್ವೇ=ಎಲ್ಲಾ, ಪಕ್ಷಿಣಃ =ಹಕ್ಕಿಗಳು, ಸರ್ವದಾ=ಯಾವಾಗಲೂ, ಮಮ=ನನ್ನ, ಅಗ್ರೇ= ಮುಂದೆ, ಪ್ರಸ್ತುವಂತಿ=ಹೊಗಳುತ್ತವೆ. ಅತಃ=ಇದರಿಂದ, ವಿದ್ಯಾ=ವಿದ್ಯೆ, ವಯಃ=ವಯಸ್ಸು ಇವುಗಳಿಂದ, ವೃದ್ಧೇಭ್ಯಃ=ಮುದುಕರಾದ, ಭವದ್ಭ್ಯಃ =ನಿಮ್ಮಿಂದ, ಧರ್ಮಂ=ಧರ್ಮವನ್ನು, ಶ್ರೋತುಂ=ಕೇಳಲು, ಇಹ= ಇಲ್ಲಿಗೆ, ಆಗತಃ=ಬಂದಿದ್ದೇನೆ. ಭವಂತಃ ಚ=ನೀವಾದರೊ, ಏತಾದೃಶಾಃ =ಇಂತಹ, ಧರ್ಮಜ್ಞಾಃ=ಧರ್ಮಜ್ಞಾನಿಗಳು. ಯತ್=ಯಾವ ಕಾರಣ ದಿಂದ, ಅತಿಥಿಂ=ಅತಿಥಿಯಾದ, ಮಾಂ=ನನ್ನನ್ನು, ಹಂತುಂ=ಕೊಲ್ಲಲು, ಉದ್ಯತಾಃ = ಉದ್ಯುಕ್ತರಾಗಿದ್ದೀರಿ. ಗೃಹಸ್ಥಧರ್ಮಃ = ಕುಟುಂಬಿಯ ಧರ್ಮವು, ಏಷಃ=ಇದು.

१. अरावप्युचितं कार्यमातिथ्यं गृहमागते ।
छेत्तुः पार्श्वगतां छायां नोपसंहरते द्रुमः ॥ ५९ ॥

२. यदि वा धनं नास्ति तदा प्रतिवचसाप्यतिथिः पूज्य एव । यतः ।

३. तृणानि भूमिरुदकं वाक् चतुर्थी च सूनृता ।
एतान्यपि सतां गेहे नोच्छिद्यन्ते कदाचन ॥ ६० ॥

---

೧. ಅ॥ ಗೃಹಂ=ಮನೆಗೆ, ಆಗತೇ=ಬಂದ, ಅರೌ ಅಪಿ=ಶತ್ರುವಿನಲ್ಲಿಯೂ, ಉಚಿತಂ=ಯೋಗ್ಯವಾದ, ಆತಿಥ್ಯಂ=ಅತಿಥಿಸತ್ಕಾರವು, ಕಾರ್ಯಂ=ಮಾಡತಕ್ಕದು. ದ್ರುಮಃ = ಮರವು, ಛೇತ್ತುಃ=ಕಡಿಯುವವನಿಗೆ, ಪಾರ್ಶ್ವಗತಾಂ=ಹತ್ತಿರವಿರುವ, ಛಾಯಾಂ=ನೆರಳನ್ನು, ನ ಉಪಸಂಹರತೇ=ಹಿಂದಕ್ಕೆ ತೆಗೆದುಕೊಳ್ಳುವುದಿಲ್ಲ.

ತಾ॥ ಮರವು ತನ್ನನ್ನು ಕಡಿಯುತ್ತಿದ್ದರೂ ಕಡಿಯುವವನಿಗೆ ಬೀಳದಂತೆ ಹತ್ತಿರದ ನೆರಳನ್ನು ಹಿಂತೆಗೆದುಕೊಳ್ಳುವುದಿಲ್ಲ. ಹಾಗೆಯೇ ಮನೆಗೆ ಬಂದವನು ಶತ್ರುವಾಗಿದ್ದರೂ ಅವನಿಗೆ ಯೋಗ್ಯವಾದ ಸನ್ಮಾನವನ್ನು ಮಾಡಬೇಕು.

೨. ಅ॥ ಧನಂ=ಹಣವು, ನಾಸ್ತಿ ಯದಿ ವಾ=ಇಲ್ಲದಿದ್ದರೂ, ತದಾ=ಆಗ, ಅತಿಥಿಃ=ಅತಿಥಿಯು, ಪ್ರತಿವಚಸಾ ಅಪಿ=ಪ್ರತಿಮಾತಿನಿಂದಲಾದರೂ, ಪೂಜ್ಯಃ ಏವ=ಪೂಜಿಸಲು ಯೋಗ್ಯನೇ. ಯತಃ=ಯಾವ ಕಾರಣದಿಂದ,

೩. ಅ॥ ತೃಣಾನಿ=ಹುಲ್ಲು (ಹುಲ್ಲಿನಿಂದ ಮಾಡಿದ ಚಾಪೆ) ಭೂಮಿಃ=ನೆಲ, ಉದಕಂ=ನೀರು, ಚತುರ್ಥೀ=ನಾಲ್ಕನೆಯದಾದ, ಸೂನೃತಾ=ಹಿತವಾದ, ವಾಕ್ ಚ=ಮಾತೂ. ಏತಾನಿ ಅಪಿ=ಇವುಗಳಾದರೂ, ಸತಾಂ=ಸಜ್ಜನರ, ಗೇಹೇ=ಮನೆಯಲ್ಲಿ, ಕದಾಚನ=ಒಂದು ಸಲವೂ, ನ ಉಚ್ಛಿದ್ಯಂತೇ=ಇಲ್ಲದಿರುವುದಿಲ್ಲ. ಯಾವಾಗಲೂ

೯. अपरं च ।

निर्गुणेष्वपि सत्त्वेषु दयां कुर्वन्ति साधवः ।
न हि संहरते ज्योत्स्नां चन्द्रश्चाण्डालवेश्मनः ॥ ६१ ॥

೧೦. अन्यच्च ।

अतिथिर्यस्य भग्नाशो गृहात्प्रतिनिवर्तते ।
स तस्मै दुष्कृतं दत्वा पुण्यमादाय गच्छति ॥ ६२ ॥

---

ತಾ॥ ಸಜ್ಜನರು ತಮ್ಮ ಮನೆಗೆ ಅತಿಥಿಗಳು ಬಂದರೆ ಅವರಿಗೆ ಭೋಜನ ಮಾಡಿಸಲು ಸಾಧ್ಯವಿಲ್ಲದಿದ್ದರೂ ಚಾಪೆ, ಸ್ಥಳ, ನೀರು ಇವುಗಳನ್ನು ನೀಡುವರು. ಇವುಗಳನ್ನು ಕೊಡಲು ಸಾಧ್ಯವಿಲ್ಲದಿದ್ದರೆ ಒಳ್ಳೆಮಾತನ್ನಾದರೂ ಆಡುವರು.

೯. ಅ॥ ಸಾಧವಃ=ಸಜ್ಜನರು, ನಿರ್ಗುಣೇಷು=ಗುಣಗಳಿಲ್ಲದ, ಸತ್ತ್ವೇಷು ಅಪಿ=ಪ್ರಾಣಿಗಳಲ್ಲಿಯೂ,ದಯಾಂ=ಕರುಣೆಯನ್ನು, ಕುರ್ವಂತಿ=ಮಾಡುತ್ತಾರೆ. ಚಂದ್ರಃ=ಚಂದ್ರನು, ಚಾಂಡಾಲವೇಶ್ಮನಃ=ಚಂಡಾಲರ ಮನೆಕ್ಕೆಮನೆ ಯಿಂದ, ಜ್ಯೋತ್ಸ್ನಾಂ=ಬೆಳದಿಂಗಳನ್ನು, ನ ಹಿ ಸಂಹರತೇ=ಹಿಂದೆಗೆದು ಕೊಳ್ಳುವುದಿಲ್ಲವಷ್ಟೆ.

ತಾ॥ ಚಂಡಾಲರು ಕೀಳುಜಾತಿಯವರೆಂದು ಚಂದ್ರನು ತನ್ನ ಬೆಳದಿಂಗಳನ್ನು ಅವರ ಮನೆಗಳಲ್ಲಿ ಬೀಳದಂತೆ ಮಾಡುವುದಿಲ್ಲ. ಹಾಗೆಯೇ ಸಜ್ಜನರು ನೀಚಪ್ರಾಣಿಗಳಲ್ಲಿಯೂ ಕರುಣೆಯನ್ನು ತೋರಿಸುವರು.

೧೦. ಅ॥ ಅತಿಥಿಃ=ಅತಿಥಿಯು, ಯಸ್ಯ=ಯಾವನ, ಗೃಹಾತ್=ಮನೆಯಿಂದ, ಭಗ್ನಾಶಃ=ನೆರವೇರದ ಆಶೆಯುಳ್ಳವನಾಗಿ, ಪ್ರತಿನಿವರ್ತತೇ=ಹಿಂದಿರುಗುತ್ತಾನೊ, ಸಃ=ಅವನು, ತಸ್ಮೈ=ಅವನಿಗೆ, ದುಷ್ಕೃತಂ=ಪಾಪವನ್ನು, ದತ್ವಾ=ಕೊಟ್ಟು, ಪುಣ್ಯಂ=ಪುಣ್ಯವನ್ನು, ಆದಾಯ=ತೆಗೆದುಕೊಂಡು, ಗಚ್ಛತಿ=ಹೋಗುತ್ತಾನೆ.

ತಾ॥ ಅತಿಥಿಯು ಗೃಹಸ್ಥನ ಮನೆಗೆ ಬಂದು ಆ ಗೃಹಸ್ಥನಿಂದ ತನ್ನ

೧೧. अन्यच्च ।

**उत्तमस्यापि वर्णस्य नीचोऽपि गृहमागतः ।**
**पूजनीयो यथायोग्यं सर्वदेवमयोऽतिथिः ॥ ६३ ॥**

೧೨. गृध्रोऽवदत्–'मार्जारो हि मांसरुचिः । पक्षिशावकाश्चात्र निवसन्ति । तेनाहमेवं ब्रवीमि' । तत् श्रुत्वा मार्जारो भूमिं स्पृष्ट्वा कर्णौ स्पृशति । ब्रूते च–मया धर्मशास्त्रं श्रुत्वा वीतरागेणेदं दुष्करं व्रतं चान्द्रायणमध्यवसितम् । परस्परं विवदमानानामपि धर्मशास्त्राणां 'अहिंसा परमो धर्मः' इत्यत्रैकमत्यम् । यतः ।

---

ಮನೋರಥವನ್ನು ಪಡೆಯದೆ ಹಿಂದಿರುಗಿದರೆ ಅತಿಥಿಯ ಪಾಪವು ಗೃಹಸ್ಥನಿಗೂ ಗೃಹಸ್ಥನ ಪುಣ್ಯವು ಅತಿಥಿಗೂ ಹೋಗುವುದು.

೧೧. ಅ॥ ಉತ್ತಮಸ್ಯ ಅಪಿ ವರ್ಣಸ್ಯ=ಬ್ರಾಹ್ಮಣನ, ಗೃಹಂ=ಮನೆಗೆ, ಆಗತಃ=ಬಂದ, ನೀಚಃ ಅಪಿ=ಕೀಳುಜಾತಿಯವನಾದರೂ, ಸರ್ವದೇವಮಯಃ=ಎಲ್ಲಾ ದೇವತಾಸ್ವರೂಪನಾದ, ಅತಿಥಿಃ=ಅತಿಥಿಯು, ಯಥಾ ಯೋಗ್ಯಂ=ಅವನ ಅಂತಸ್ತಿಗೆ ಅನುಗುಣವಾಗಿ, ಪೂಜನೀಯಃ=ಪೂಜಿಸಲು ಯೋಗ್ಯನು.

ತಾ॥ ಬ್ರಾಹ್ಮಣನ ಮನೆಗೆ ಬಂದ ಅತಿಥಿಯು ಕೀಳು ಜಾತಿಯವನಾದರೂ ಅವನು ಎಲ್ಲಾ ದೇವತೆಗಳ ಸ್ವರೂಪನಾಗಿರುವುದರಿಂದ ಅವನನ್ನು ಬ್ರಾಹ್ಮಣನು ಉಚಿತ ರೀತಿಯಿಂದ ಪೂಜಿಸಲೇಬೇಕು.

೧೨. ಅ॥ ಗೃಧ್ರಃ=ಹದ್ದು, ಅವದತ್=ಹೇಳಿತು. ಮಾರ್ಜಾರಃ=ಬೆಕ್ಕು, ಮಾಂಸರುಚಿಃ ಹಿ=ಮಾಂಸದಲ್ಲಿ ಆಶೆಯುಳ್ಳದ್ದು. ಅತ್ರ=ಇಲ್ಲಿ, ಪಕ್ಷಿಶಾವಕಾಃ ಚ=ಹಕ್ಕಿಮರಿಗಳೂ, ನಿವಸಂತಿ=ವಾಸ ಮಾಡುತ್ತವೆ, ತೇನ=ಆದ್ದರಿಂದ, ಅಹಂ=ನಾನು, ಏವಂ=ಹೀಗೆ, ಬ್ರವೀಮಿ=ಹೇಳುತ್ತೇನೆ. ತತ್=ಅದನ್ನು, ಶ್ರುತ್ವಾ=ಕೇಳಿ, ಮಾರ್ಜಾರಃ=ಬೆಕ್ಕು, ಭೂಮಿಂ=ನೆಲವನ್ನು, ಸ್ಪೃಷ್ಟ್ವಾ=ಮುಟ್ಟಿ, ಕರ್ಣೌ=ಕಿವಿಗಳನ್ನು, ಸ್ಪೃಶತಿ=

೧೩. सर्वहिंसानिवृत्ता ये नराः सर्वंसहाश्च ये ।
सर्वस्याश्रयभूताश्च ते नराः स्वर्गगामिनः ॥ ६४ ॥

೧೪. एक एव सुहृद्धर्मो निधनेऽप्यनुयाति यः ।
शरीरेण समं नाशं सर्वमन्यत्तु गच्छति ॥ ६५ ॥

---

ಮುಟ್ಟುತ್ತದೆ. ಬ್ರೂತೇ ಚ=ಮತ್ತು ಹೇಳುತ್ತದೆ. ಧರ್ಮಶಾಸ್ತ್ರಂ=ಧರ್ಮಶಾಸ್ತ್ರವನ್ನು, ಶ್ರುತ್ವಾ=ಕೇಳಿ, ವೀತರಾಗೇಣ=ವೈರಾಗ್ಯವುಳ್ಳ ಮಯಾ=ನನ್ನಿಂದ, ಇದಂ=ಈ, ದುಷ್ಕರಂ=ಮಾಡಲಾಗದ, ಚಾಂದ್ರಾಯಣಂ ವ್ರತಂ=ಚಾಂದ್ರಾಯಣವೆಂಬ ವ್ರತವು, ಅಧ್ಯವಸಿತಂ=ಮಾಡುವುದಾಗಿ ನಿಶ್ಚಯಿಸಲ್ಪಟ್ಟಿತು. ಪರಸ್ಪರಂ=ಅನ್ಯೋನ್ಯವಾಗಿ, ವಿವದಮಾನಾನಾಂ ಅಪಿ=ವಿರುದ್ಧವಾಗಿ ಹೇಳುವವುಗಳಾದರೂ, ಧರ್ಮಶಾಸ್ತ್ರಾಣಾಂ=ಧರ್ಮಶಾಸ್ತ್ರಗಳಿಗೆ, ಅಹಿಂಸಾ=ಹಿಂಸೆಮಾಡದಿರುವುದು, ಪರಮಃ=ಉತ್ತಮವಾದ, ಧರ್ಮಃ=ಧರ್ಮವು. ಇತ್ಯತ್ರ=ಹೀಗೆಂಬ ವಿಷಯದಲ್ಲಿ, ಐಕಮತ್ಯಂ=ಒಮ್ಮತವು (ಇದೆ) ಯತಃ=ಯಾವ ಕಾರಣದಿಂದ,

೧೩. ಅ॥ ಯೇ=ಯಾರು, ಸರ್ವ=ಎಲ್ಲಾ, ಹಿಂಸಾ=ಹಿಂಸೆಗಳಿಂದ, ನಿವೃತ್ತಾಃ=ಹಿಂದಿರುಗಿದವರೊ, ಯೇ ನರಾಃ=ಯಾವ ಮನುಷ್ಯರು, ಸರ್ವಂಸಹಾಃ ಚ=ಎಲ್ಲವನ್ನೂ ಸಹಿಸುವವರೊ, ಸರ್ವಸ್ಯ=ಎಲ್ಲಕ್ಕೂ, ಆಶ್ರಯಭೂತಾಃ=ಆಶ್ರಯರಾಗಿರುವರೊ, ತೇ ನರಾಃ=ಆ ಮನುಷ್ಯರು, ಸ್ವರ್ಗಗಾಮಿನಃ=ಸ್ವರ್ಗಕ್ಕೆ ಹೋಗುವವರು.

ತಾ॥ ಯಾವ ಹಿಂಸೆಯನ್ನೂ ಮಾಡದ, ಎಲ್ಲವನ್ನೂ ಸಹಿಸಿಕೊಳ್ಳುವ ಎಲ್ಲಕ್ಕೂ ಆಶ್ರಯರಾದ ಮಾನವರು ಸ್ವರ್ಗವನ್ನು ಸೇರುವರು.

೧೪. ಅ॥ ಯಃ=ಯಾವ ಧರ್ಮವು, ನಿಧನೇ ಅಪಿ=ಸಾವಿನಲ್ಲಿಯೂ, ಅನುಯಾತಿ=ಅನುಸರಿಸಿ ಹೋಗವುದೊ. ಏಕಃ ಏವ=ಒಂದೇ, ಸುಹೃದ್ಧರ್ಮಃ=ಮಿತ್ರನ ಧರ್ಮವು. ಅನ್ಯತ್=ಬೇರೆ, ಸರ್ವಂ ತು=ಎಲ್ಲವೂ, ಶರೀರೇಣ ಸಮಂ=ದೇಹದೊಡನೆ, ನಾಶಂ=ನಾಶವನ್ನು, ಗಚ್ಛತಿ=ಹೊಂದುತ್ತದೆ.

೧೫. योऽत्ति यस्य यदा मांसमुभयोः पश्यतान्तरम् ।
एकस्य क्षणिका प्रीतिरन्यः प्राणैर्विमुच्यते ॥ ६६ ॥

೧೬. मर्तव्यमिति यद्दुःखं पुरुषस्योपजायते ।
शक्यते नानुमानेन परेण परिवर्णितुम् ॥ ६७ ॥

---

ತಾ॥ ಮೈತ್ರಿ ಮಾತ್ರ ಸಾಯುವ ಸಮಯದಲ್ಲಿಯೂ ಅನುಸರಿಸಿಹೋಗುವುದು. ಇತರ ಧರ್ಮಗಳೆಲ್ಲ ದೇಹನಾಶವಾದ ಕೂಡಲೆ ನಾಶವಾಗುವುವು.

೧೫. ಅ॥ ಯಃ=ಯಾವನು, ಯದಾ=ಯಾವಾಗ, ಯಸ್ಯ=ಯಾವನ, ಮಾಂಸಂ=ಮಾಂಸವನ್ನು, ಅತ್ತಿ=ತಿನ್ನುತ್ತಾನೊ, ಉಭಯೋಃ=ಇವರಿಬ್ಬರಲ್ಲಿ, ಅಂತರಂ=ವ್ಯತ್ಯಾಸವನ್ನು, ಪಶ್ಯತ=ನೋಡಿರಿ. ಏಕಸ್ಯ=ತಿನ್ನುವ ಒಬ್ಬನಿಗೆ, ಕ್ಷಣಿಕಾ=ಕ್ಷಣಕಾಲದ, ಪ್ರೀತಿಃ=ಸಂತೋಷವು. ಅನ್ಯಃ=ತಿನ್ನಿಸಿಕೊಳ್ಳುವ ಇನ್ನೊಬ್ಬನು, ಪ್ರಾಣೈಃ ವಿಮುಚ್ಯತೇ=ಪ್ರಾಣದಿಂದ ಬಿಡಲ್ಪಡುತ್ತಾನೆ.

ತಾ॥ ಮಾಂಸವನ್ನು ತಿನ್ನುವ ಮತ್ತು ತಿನ್ನಿಸಿಕೊಳ್ಳುವವರಲ್ಲಿ ಬಹಳ ವ್ಯತ್ಯಾಸವಿದೆ. ತಿನ್ನುವವನಿಗೆ ಮಾಂಸವನ್ನು ತಿನ್ನುವ ಸಮಯದಲ್ಲಿ ಮಾತ್ರ ಸಂತೋಷವುಂಟಾಗುತ್ತದೆ. ತಿನ್ನಿಸಿಕೊಂಡವನು ಮೃತನಾಗಿ ಬಹಳ ಕಾಲ ದುಃಖಕ್ಕೀಡಾಗುವನು.

೧೬. ಅ॥ ಪುರುಷಸ್ಯ=ಮನುಷ್ಯನಿಗೆ, ಮರ್ತವ್ಯಂ ಇತಿ=ಸಾಯತಕ್ಕದ್ದೆಂದು, ಯತ್=ಯಾವ, ದುಃಖಂ=ವ್ಯಸನವು, ಉಪಜಾಯತೇ=ಉಂಟಾಗುವುದೊ (ಅದನ್ನು) ಪರೇಣ=ಇನ್ನೊಬ್ಬನಿಂದ, ಅನುಮಾನೇನ=ಊಹೆಯಿಂದ, ಪರಿವರ್ಣಿತುಂ=ವರ್ಣನೆ ಮಾಡಲು, ನ ಶಕ್ಯತೇ=ಸಾಧ್ಯವಾಗುವುದಿಲ್ಲ.

ತಾ॥ ಮನುಷ್ಯನಿಗೆ ಸಾಯತಕ್ಕದ್ದೆಂದು ನಿಶ್ಚಯವಾದಾಗ ಉಂಟಾಗುವ ದುಃಖವನ್ನು ಇತರರಿಗೆ ಊಹಿಸಿ ವರ್ಣಿಸಲು ಸಾಧ್ಯವಿಲ್ಲ.

೧೭. शृणु पुनः ।

**स्वच्छन्दवनजातेन शाकेनापि प्रपूर्यते ।**
**अस्य दग्धोदरस्यार्थे कः कुर्यात्पातकं महत्' ॥ ६८ ॥**

೧೮. एवं विश्वास्य स मार्जारस्तरुकोटरे स्थितः । ततो दिनेषु गच्छत्सु पक्षिशावकानाक्रम्य कोटरमानीय प्रत्यहं खादति । येषामपत्यानि खादितानि तैः शोकार्तैर्विलपद्भिरितस्ततो जिज्ञासा समारब्धा । तत्परिज्ञाय

---

೧೭. ಅ|| ಪುನಃ = ತಿರುಗಿ, ಶೃಣು = ಕೇಳು. ಸ್ವಚ್ಛಂದ = ಸ್ವೇಚ್ಛೆಯಾಗಿ, ವನಜಾತೇನ = ಕಾಡಿನಲ್ಲಿ ಹುಟ್ಟಿದ, ಶಾಕೇನ ಅಪಿ = ತರಕಾರಿಯಿಂದಲೂ, ಪ್ರಪೂರ್ಯತೇ = ತುಂಬಲ್ಪಡುತ್ತದೆ. ಅಸ್ಯ = ಈ, ದಗ್ಧ = ಸುಟ್ಟ, ಉದರಸ್ಯ ಅರ್ಥೇ = ಹೊಟ್ಟೆಯ ಪ್ರಯೋಜನದ ವಿಷಯದಲ್ಲಿ, ಕಃ = ಯಾವನು, ಮಹತ್ = ಹೆಚ್ಚಾದ, ಪಾತಕಂ = ಪಾಪವನ್ನು, ಕುರ್ಯಾತ್ = ಮಾಡಿಯಾನು?

ತಾ|| ಕಾಡಿನಲ್ಲಿ ತಾನಾಗಿಯೇ ಬೆಳೆದ ತರಕಾರಿಯನ್ನು ತಿಂದರೂ ಹೊಟ್ಟೆಯು ತುಂಬುವುದು. ಈ ಕೆಟ್ಟ ಹೊಟ್ಟೆಗಾಗಿ ಯಾವನು ಇನ್ನೊಬ್ಬರನ್ನು ಹಿಂಸಿಸಿ ಮಹಾ ಪಾಪವನ್ನು ಮಾಡಿಯಾನು ?

೧೮. ಅ|| ಸಃ = ಆ, ಮಾರ್ಜಾರಃ = ಬೆಕ್ಕು, ಏವಂ = ಹೀಗೆ, ವಿಶ್ವಾಸ = ನಂಬಿಸಿ, ತರು = ಮರದ, ಕೋಟರೇ = ಪೊಟರೆಯಲ್ಲಿ, ಸ್ಥಿತಃ = ಇದ್ದಿತು. ತತಃ = ಬಳಿಕ, ದಿನೇಷು = ದಿವಸಗಳು, ಗಚ್ಛತ್ಸು = ಕಳೆಯುತ್ತಿರಲು, ಪಕ್ಷಿ-ಶಾವಕಾನ್ = ಹಕ್ಕಿಮರಿಗಳನ್ನು, ಆಕ್ರಮ್ಯ = ಆಕ್ರಮಿಸಿ (ಹಿಡಿದು), ಕೋಟರಂ = ಪೊಟರೆಗೆ, ಆನೀಯ = ತಂದು, ಪ್ರತ್ಯಹಂ = ನಿತ್ಯವೂ, ಖಾದತಿ = ತಿನ್ನುತ್ತದೆ. ಯೇಷಾಂ = ಯಾವ ಪಕ್ಷಿಗಳ, ಅಪತ್ಯಾನಿ = ಮರಿಗಳು, ಖಾದಿತಾನಿ = ತಿನ್ನಲ್ಪಟ್ಟವೊ, ಶೋಕಾರ್ತೈಃ = ದುಃಖದಿಂದ ಪೀಡಿತರಾದ, ವಿಲಪದ್ಭಿಃ = ಗೋಳಾಡುತ್ತಿರುವ, ತೈಃ = ಆ ಹಕ್ಕಿಗಳಿಂದ, ಇತಃ ತತಃ = ಅತ್ತ ಇತ್ತ, ಜಿಜ್ಞಾಸಾ = ತಿಳಿಯಬೇಕೆಂಬ ಇಚ್ಛೆಯು, ಸಮಾರಬ್ಧಾ = ಆರಂಭಿಸಲ್ಪಟ್ಟಿತು. ತತ್ = ಅದನ್ನು, ಪರಿಜ್ಞಾಯ = ತಿಳಿದು, ಮಾರ್ಜಾರಃ

मार्जारः कोटरान्निःसृत्य बहिः पलायितः। पश्चात्पक्षिभिरितस्ततो निरूपयद्भिस्तत्र तरुकोटरे शावकास्थीनि प्राप्तानि। अनन्तरं त ऊचुः—'अनेनैव जरद्गवेनास्माकं शावकाः खादिताः' इति सर्वैः पक्षिभिर्निश्चित्य गृध्रो व्यापादितः। अतोऽहं ब्रवीमि—'अज्ञातकुलशीलस्य' इत्यादि॥ इत्याकर्ण्य स जम्बुकः सकोपमाह—'मृगस्य प्रथमदर्शनदिने भवानप्यज्ञातकुलशील एव। तत्कथं भवता सहैतस्य स्नेहानुवृत्तिरुत्तरोत्तरं वर्धते।

---

=ಬೆಕ್ಕು, ಕೋಟರಾತ್=ಪೊಟರೆಯಿಂದ, ನಿಸ್ಸೃತ್ಯ=ಹೊರಟು, ಬಹಿಃ= ಹೊರಗೆ, ಪಲಾಯಿತಃ=ಓಡಿತು. ಪಶ್ಚಾತ್=ತರುವಾಯ, ಇತಸ್ತತಃ= ಇತ್ತ ಅತ್ತ, ನಿರೂಪಯದ್ಭಿಃ=ನೋಡುತ್ತಿರುವ, ಪಕ್ಷಿಭಿಃ=ಹಕ್ಕಿಗಳಿಂದ, ತತ್ರ=ಆ, ತರುಕೋಟರೇ=ಮರದ ಪೊಟರೆಯಲ್ಲಿ, ಶಾವಕಾಸ್ಥೀನಿ= ಮರಿಗಳ ಮೂಳೆಗಳು, ಪ್ರಾಪ್ತಾನಿ=ಹೊಂದಲ್ಪಟ್ಟವು. ಅನಂತರಂ=ಬಳಿಕ, ತೇ=ಆ ಹಕ್ಕಿಗಳು, ಊಚುಃ=ಹೇಳಿದುವು. ಅನೇನ=ಈ, ಜರದ್ಗವೇನ ಏವ =ಜರದ್ಗವನಿಂದಲೇ, ಅಸ್ಮಾಕಂ=ನಮ್ಮ, ಶಾವಕಾಃ=ಮರಿಗಳು, ಖಾದಿತಾಃ=ತಿನ್ನಲ್ಪಟ್ಟವು. ಇತಿ=ಹೀಗೆಂದು, ಸರ್ವೈಃ=ಎಲ್ಲ,ಪಕ್ಷಿಭಿಃ= ಹಕ್ಕಿಗಳಿಂದ, ನಿಶ್ಚಿತ್ಯ=ನಿಶ್ಚಯಿಸಿ, ಗೃಧ್ರಃ=ಹದ್ದು, ವ್ಯಾಪಾದಿತಃ= ಕೊಲ್ಲಲ್ಪಟ್ಟಿತು. ಅತಃ=ಈ ಕಾರಣದಿಂದ, ಅಹಂ=ನಾನು, ಬ್ರವೀಮಿ= ಹೇಳುತ್ತೇನೆ.

ಅ॥ ಅಜ್ಞಾತಕುಲಶೀಲಸ್ಯ=ತಿಳಿಯಲ್ಪಡದ ವಂಶ ಮತ್ತು ಸ್ವಭಾವವುಳ್ಳವನ, ಇತ್ಯಾದಿ=ಇದೇ ಮೊದಲಾದ್ದನ್ನು. ಇತಿ=ಈ ಮಾತನ್ನು, ಆಕರ್ಣ್ಯ =ಕೇಳಿ, ಸಃ ಜಂಬುಕಃ=ಆ ನರಿಯು, ಸಕೋಪಂ=ಸಿಟ್ಟಿನಿಂದ ಸಹಿತವಾಗಿ, ಆಹ=ಹೇಳುತ್ತದೆ. ಮೃಗಸ್ಯ=ಜಿಂಕೆಯನ್ನು, ಪ್ರಥಮದರ್ಶನದಿನೇ= ಮೊದಲು ನೋಡುವ ದಿನದಲ್ಲಿ, ಭವಾನ್ ಅಪಿ=ನೀನೂ, ಅಜ್ಞಾತಕುಲ-ಶೀಲಃ ಏವ=ತಿಳಿಯಲ್ಪಡದ ವಂಶ ಮತ್ತು ಸ್ವಭಾವವುಳ್ಳವನೇ. ತತ್= ಆದ್ದರಿಂದ, ಕಥಂ=ಹೇಗೆ, ಭವತಾ ಸಹ=ನಿನ್ನೊಡನೆ, ಏತಸ್ಯ=ಈ

೬೯. यत्र विद्वज्जनो नास्ति श्लाघ्यस्तत्राल्पधीरपि ।
निरस्तपादपे देशे एरण्डोऽपि द्रुमायते ॥ ६९ ॥

೭೦. अन्यच्च ।
अयं निजः परो वेति गणना लघुचेतसाम् ।
उदारचरितानान्तु वसुधैव कुटुम्बकम् ॥ ७० ॥

---

ವ್ಯಗದ, ಸ್ನೇಹ=ಸ್ನೇಹದ, ಅನುವೃತ್ತಿಃ=ಅನುಸರಣೆಯು, ಉತ್ತರೋ-ತ್ತರಂ=ಮುಂದೆ ಮುಂದೆ, ವರ್ಧತೇ=ಹೆಚ್ಚುತ್ತಿದೆ.

೬೯. ಅ॥ ಯತ್ರ=ಯಾವ ಸ್ಥಳದಲ್ಲಿ, ವಿದ್ವಜ್ಜನಃ=ವಿದ್ವಾಂಸರು, ನಾಸ್ತಿ=ಇಲ್ಲವೊ, ತತ್ರ=ಅಲ್ಲಿ, ಅಲ್ಪಧೀಃ ಅಪಿ=ಅಲ್ಪಬುದ್ಧಿಯುಳ್ಳವನೂ, ಶ್ಲಾಘ್ಯಃ=ಹೊಗಳಲು ಯೋಗ್ಯನು. ನಿರಸ್ತ=ಹೋಗಲಾಡಿಸಲ್ಪಟ್ಟ, ಪಾದಪೇ=ಮರವುಳ್ಳ, ದೇಶೇ=ಸ್ಥಳದಲ್ಲಿ, ಏರಂಡಃ ಅಪಿ=ಹರಳಿನ ಗಿಡವೂ, ದ್ರುಮಾಯತೇ=ಮರದಂತಾಗುವುದು. ಮರವೇ ಇಲ್ಲದ

ತಾ॥ ದೊಡ್ಡ ಮರಗಳಿಲ್ಲದ ಪ್ರದೇಶದಲ್ಲಿ ಸಣ್ಣ ಹರಳಿನ ಗಿಡವೂ ಮರವೆಂದು ಭಾವಿಸಲಾಗುವುದು. ಹಾಗೆಯೇ ವಿದ್ವಾಂಸರಿಲ್ಲದ ಸ್ಥಳದಲ್ಲಿ ಅಲ್ಪಜ್ಞನೂ ಪೂಜ್ಯನಾಗುವನು.

೭೦. ಅ॥ ಅಯಂ=ಇವನು, ನಿಜಃ=ನಮ್ಮವನು, ವಾ=ಅಥವಾ, ಪರಃ=ಬೇರೆಯವನು, ಇತಿ=ಹೀಗೆಂಬ, ಗಣನಾ=ಎಣಿಕೆಯು, ಲಘು-ಚೇತಸಾಂ=ಅಲ್ಪ ಬುದ್ಧಿಯುಳ್ಳವರಿಗೆ. ಉದಾರಚರಿತಾನಾಂ ತು=ಉತ್ಕೃಷ್ಟ ನಡತೆಯುಳ್ಳವರಿಗೆ, ವಸುಧೈವ=ಭೂಮಿಯೇ, ಕುಟುಂಬಕಂ=ಕುಟುಂಬವು (ಪೋಷ್ಯವರ್ಗವು).

ತಾ॥ ಅಲ್ಪಬುದ್ಧಿಯುಳ್ಳ ಮೂಢರು ಇವನು ನಮ್ಮವ ಅಥವಾ ಬೇರೆಯವ ಎಂದು ಭೇದವನ್ನು ಎಣಿಸುವರು. ಉತ್ತಮ ನಡತೆಯುಳ್ಳ ಮಹಾತ್ಮರು, ಭೂಮಿಯನ್ನೆ ತಮ್ಮ ಕುಟುಂಬವೆಂದು ತಿಳಿಯುವರು.

೨೧. यथायं मृगो मम बन्धुस्तथा भवानपि ।' मृगोऽब्रवीत्—'किमनेनोत्तरेण । सर्वैरेकत्र विश्रम्भालापैः सुखिभिः स्थीयताम् । यतः ।

೨೨. न कश्चित्कस्यचिन्मित्रं न कश्चित्कस्यचिद्रिपुः ।
व्यवहारेण मित्राणि जायन्ते रिपवस्तथा ॥ ७१ ॥'

೨೩. काकेनोक्तम्—'एवमस्तु ।' अथ प्रातः सर्वे यथाभिमतदेशं गताः ।

---

೨೧. ಅ॥ ಯಥಾ = ಹೇಗೆ, ಅಯಂ = ಈ, ಮೃಗಃ = ಜಿಂಕೆಯು, ಮಮ = ನನ್ನ, ಬಂಧುಃ = ಬಂಧುವೊ, ತಥಾ = ಹಾಗೆಯೇ, ಭವಾನ್ ಅಪಿ = ನೀನೂ. ಮೃಗಃ = ಜಿಂಕೆಯು, ಅಬ್ರವೀತ್ = ಹೇಳಿತು. ಅನೇನ = ಈ, ಉತ್ತರೇಣ = ಉತ್ತರದಿಂದ, ಕಿಂ = ಏನು ಪ್ರಯೋಜನ ? ಏಕತ್ರ = ಒಂದೆಡೆ, ವಿಶ್ರಂಭಾಲಾಪೈಃ = ವಿಶ್ವಾಸದ ಮಾತುಗಳುಳ್ಳ, ಸರ್ವೈಃ = ಎಲ್ಲರಿಂದಲೂ, ಸುಖಿಭಿಃ = ಸುಖವುಳ್ಳವರಿಂದ, ಸ್ಥೀಯತಾಂ = ಇರೋಣವಾಗಲಿ (ಎಲ್ಲರೂ ನಂಬಿಕೆಯಿಂದ ಮಾತಾಡುತ್ತ ಸುಖವಾಗಿರೋಣ). ಯತಃ = ಯಾವ ಕಾರಣ ದಿಂದ,

೨೨. ಅ॥ ಕಶ್ಚಿತ್ = ಒಬ್ಬನು, ಕಸ್ಯಚಿತ್ = ಒಬ್ಬನಿಗೆ, ಮಿತ್ರಂ = ಸ್ನೇಹಿತನು, ನ = ಅಲ್ಲ. ಕಶ್ಚಿತ್ = ಒಬ್ಬನು, ಕಸ್ಯಚಿತ್ = ಒಬ್ಬನಿಗೆ, ರಿಪುಃ = ಶತ್ರುವು, ನ = ಅಲ್ಲ. ವ್ಯವಹಾರೇಣ = ಮಾತು ಮತ್ತು ಕಾರ್ಯಗಳಿಂದ, ಮಿತ್ರಾಣಿ = ಸ್ನೇಹಿತರು, ತಥಾ = ಹಾಗೆಯೇ, ರಿಪವಃ = ಶತ್ರುಗಳು, ಜಾಯಂತೇ = ಆಗುತ್ತಾರೆ.

ತಾ॥ ಒಬ್ಬನಿಗೆ ಒಬ್ಬನು ಶತ್ರುವೆಂದೂ, ಮಿತ್ರನೆಂದೂ ಸ್ವಭಾವದಿಂದಲೇ ನಿಶ್ಚಯಮಾಡಲ್ಪಟ್ಟಿರುವುದಿಲ್ಲ. ನಡೆವಳಿಕೆಯಿಂದ ಶತ್ರುಗಳೆಂದೂ, ಮಿತ್ರರೆಂದೂ ತಿಳಿಯಲ್ಪಡುತ್ತಾರೆ.

೨೩. ಅ॥ ಕಾಕೇನ = ಕಾಗೆಯಿಂದ, ಉಕ್ತಂ = ಹೇಳಲ್ಪಟ್ಟಿತು. ಏವಂ = ಹೀಗೆ, ಅಸ್ತು = ಆಗಲಿ, ಅಥ = ತರುವಾಯ, ಪ್ರಾತಃ = ಬೆಳಗ್ಗೆ, ಸರ್ವೇ = ಎಲ್ಲವೂ, ಯಥಾಭಿಮತಂ ದೇಶಂ = ಇಷ್ಟಬಂದ ಸ್ಥಳಕ್ಕೆ, ಗತಾಃ = ಹೋದುವು.

एकदा निभृतं शृगालो ब्रूते—'सखे अस्मिन्वनैकदेशे सस्यपूर्णक्षेत्रमस्ति । तदहं त्वां नीत्वा दर्शयामि ।' तथा कृते सति मृगः प्रत्यहं तत्र गत्वा सस्यं खादति । अथ क्षेत्रपतिना तत् दृष्ट्वा पाशो योजितः । अनन्तरं पुनरागतो मृगः पाशैः बद्धोऽचिन्तयत्—'को मामितः कालपाशादिव व्याधपाशात् त्रातुं मित्रादन्यः समर्थः ।' तत्रान्तरे जम्बुकस्तत्रागत्योपस्थितोऽचिन्तयत्—फलिता तावदस्माकं कपटप्रबन्धेन मनोरथसिद्धिः । एतस्योत्कृत्यमानस्य मांसासृग्लिप्तान्यस्थीनि मयावश्यं प्राप्तव्यानि । तानि बाहुल्येन भोजनानि भविष्यन्ति ।' मृगस्तं दृष्ट्वोल्लासितो ब्रूते—'सखे, छिन्धि तावन्मम बन्धनम् । सत्वरं त्रायस्व माम् । यतः ।

---

ಏಕದಾ = ಒಂದಾನೊಂದು ವೇಳೆ, ಶೃಗಾಲಃ = ನರಿಯು, ನಿಭೃತಂ = ವಿನಯ ವಿಶ್ವಾಸ ದಿಂದ ಸಹಿತವಾಗಿ, ಬ್ರೂತೇ = ಹೇಳುತ್ತದೆ. ಸಖೇ = ಸ್ನೇಹಿತನೇ, ಅಸ್ಮಿನ್ = ಈ, ವನೋದ್ದೇಶೇ = ಕಾಡಿನ ಪ್ರದೇಶದಲ್ಲಿ, ಸಸ್ಯಪೂರ್ಣ = ಪೈರಿನಿಂದ ತುಂಬಿದ, ಕ್ಷೇತ್ರಂ = ಹೊಲವು, ಅಸ್ತಿ = ಇದೆ. ಅಹಂ = ನಾನು, ತತ್ = ಅದನ್ನು, ತ್ವಾಂ = ನಿನ್ನನ್ನು, ನೀತ್ವಾ = ಒಯ್ದು, ದರ್ಶಯಾಮಿ = ತೋರಿಸುತ್ತೇನೆ, ತಥಾ ಕೃತೇ = ಹಾಗೆ ಮಾಡಲ್ಪಡಲು, ಮೃಗಃ = ಜಿಂಕೆಯು, ಪ್ರತ್ಯಹಂ = ನಿತ್ಯವೂ, ತತ್ರ = ಅಲ್ಲಿಗೆ, ಗತ್ವಾ = ಹೋಗಿ, ಸಸ್ಯಂ = ಪೈರನ್ನು, ಖಾದತಿ = ತಿನ್ನುತ್ತದೆ. ಅಥ = ಬಳಿಕ, ಕ್ಷೇತ್ರಪತಿನಾ = ಹೊಲದ ಯಜಮಾನನಿಂದ, ತತ್ = ಅದನ್ನು, ದೃಷ್ಟ್ವಾ = ನೋಡಿ, ಪಾಶಃ = ಹಗ್ಗವು, ಯೋಜಿತಃ = ಪ್ರಯೋಗಿಸಲ್ಪಟ್ಟಿತು. ಅನಂತರಂ = ಬಳಿಕ, ಪುನಃ = ತಿರುಗಿ, ಆಗತಃ = ಬಂದ, ಮೃಗಃ = ಜಿಂಕೆಯು, ಪಾಶೈಃ = ಹಗ್ಗಗಳಿಂದ, ಬದ್ಧಃ = ಕಟ್ಟಲ್ಪಟ್ಟದ್ದಾಗಿ, ಅಚಿಂತಯತ್ = ಆಲೋಚಿಸಿತು. ಮಾಂ = ನನ್ನನ್ನು, ಕಾಲಪಾಶಾತ್ ಇವ = ಯಮನ ಹಗ್ಗದಂತಿರುವ, ಇತಃ = ಈ, ವ್ಯಾಧಪಾಶಾತ್ = ಬೇಡನ ಹಗ್ಗದಿಂದ, ತ್ರಾತುಂ = ಕಾಪಾಡುವುದಕ್ಕೆ, ಮಿತ್ರಾತ್

೨೪. आपत्सु मित्रं जानीयाद् युद्धे शूरमृणे शुचिम् ।
भार्यां क्षीणेषु वित्तेषु व्यसनेषु च बान्धवान् ॥ ७२ ॥

---

= ಸ್ನೇಹಿತನಿಗಿಂತ, ಅನ್ಯಃ = ಬೇರೆ, ಕಃ = ಯಾವನು, ಸಮರ್ಥಃ = ಶಕ್ತನು, ತತ್ರ ಅಂತರೇ = ಆ ನಡುವೆ, ಜಂಬುಕಃ = ನರಿಯು, ತತ್ರ = ಅಲ್ಲಿಗೆ, ಆಗತ್ಯ = ಬಂದು, ಉಪಸ್ಥಿತಃ = ಸಮೀಪಿಸಿದ್ದಾಗಿ, ಅಚಿಂತಯತ್ = ಆಲೋಚಿಸಿತು. ಅಸ್ಮಾಕಂ = ನಮ್ಮ, ಕಪಟಪ್ರಬಂಧೇನ = ಕೃತ್ರಿಮ ರಚನೆಯಿಂದ, ಮನೋರಥಸಿದ್ಧಿಃ ಫಲಿತಾ = ಇಷ್ಟಾರ್ಥವು ಕೈಗೂಡಿತು. ಉತ್ಕೃತ್ಯ-ಮಾನಸ್ಯ = ಕತ್ತರಿಸಲ್ಪಡುವ, ಏತಸ್ಯ = ಈ ಮೃಗದ, ಮಾಂಸ = ಮಾಂಸ, ಅಸೃಕ್ = ರಕ್ತ ಇವುಗಳಿಂದ, ಲಿಪ್ತಾನಿ = ಲೇಪನಮಾಡಲ್ಪಟ್ಟ, ಅಸ್ಥೀನಿ = ಮೂಳೆಗಳು, ಮಯಾ = ನನ್ನಿಂದ, ಅವಶ್ಯಂ = ನಿಶ್ಚಯವಾಗಿಯೂ, ಪ್ರಾಪ್ತವ್ಯಾನಿ = ಹೊಂದತಕ್ಕವು. ತಾನಿ = ಅವು, ಬಾಹುಲ್ಯೇನ = ಹೆಚ್ಚಿನಿಂದ, ಭೋಜನಾನಿ = ಊಟಗಳು, ಭವಿಷ್ಯಂತಿ = ಆಗುವುವು. ಮೃಗಃ = ಜಿಂಕೆಯು, ತಂ = ಆ ನರಿಯನ್ನು, ದೃಷ್ಟ್ವಾ = ನೋಡಿ, ಉಲ್ಲಾಸಿತಃ = ಉತ್ಸಾಹಗೊಂಡದ್ದಾಗಿ, ಬ್ರೂತೇ = ಹೇಳುತ್ತದೆ. ಸಖೇ = ಸ್ನೇಹಿತನೆ, ತಾವತ್ = ಮೊದಲು, ಮಮ = ನನ್ನ, ಬಂಧನಂ = ಕಟ್ಟನ್ನು, ಛಿಂಧಿ = ಕತ್ತರಿಸು. ಸತ್ವರಂ = ಬೇಗನೆ, ಮಾಂ = ನನ್ನನ್ನು, ತ್ರಾಯಸ್ವ = ಕಾಪಾಡು. ಯತಃ = ಯಾವ ಕಾರಣದಿಂದ.

೨೪ ಅ॥ ಮಿತ್ರಂ = ಸ್ನೇಹಿತನನ್ನು, ಆಪತ್ಸು = ಕಷ್ಟಕಾಲದಲ್ಲಿ, ಶೂರಂ = ಪರಾಕ್ರಮಶಾಲಿಯನ್ನು, ಯುದ್ಧೇ = ಯುದ್ಧದಲ್ಲಿ, ಶುಚಿಂ = ಶುದ್ಧನಾದವನನ್ನು, ಋಣೇ = ಸಾಲದಲ್ಲಿ, ಭಾರ್ಯಾಂ = ಹೆಂಡತಿಯನ್ನು, ವಿತ್ತೇಷು = ಹಣವು, ಕ್ಷೀಣೇಷು = ಕಡಿಮೆಯಾಗಲು, ಚ = ಮತ್ತು, ಬಾಂಧವಾನ್ = ಬಂಧುಗಳನ್ನು, ವ್ಯಸನೇಷು = ದುಃಖಗಳಲ್ಲಿ, ಜಾನೀಯಾತ್ = ತಿಳಿಯಬೇಕು.

ತಾ॥ ಸ್ನೇಹಿತನು ಹೇಗಿರುವನೆಂಬುದನ್ನು ಕಷ್ಟಕಾಲದಲ್ಲಿಯೂ, ಸಿಪಾಯಿಯು ಪರಾಕ್ರಮಶಾಲಿಯಾಗಿರುವನೊ ಎಂಬುದನ್ನು ಯುದ್ಧದಲ್ಲಿಯೂ,

७३. अपरं च ।

**उत्सवे व्यसने चैव दुर्भिक्षे राष्ट्रविप्लवे ।**
**राजद्वारे श्मशाने च यस्तिष्ठति स बान्धवः ॥ ७३ ॥**

७८. जम्बुको मुहुर्मुहुः पाशं विलोक्याचिन्तयत्–'दृढस्तावदयं बन्धः' । ब्रूते च–'सखे, स्नायुनिर्मिता एताः पाशाः । तदद्य भट्टारकवारे

---

ಮನುಷ್ಯನು ಶುದ್ಧನಾಗಿರುವನೊ ಎಂಬುದನ್ನು ಸಾಲ ಕೊಟ್ಟಾಗಲೂ, ಹೆಂಡತಿ ಗಂಡನಲ್ಲಿ ಪ್ರೀತಿಯಿಂದಿರುವಳೊ ಎಂಬುದನ್ನು ಗಂಡನಿಗೆ ಬಡತನ ಬಂದಾಗಲೂ, ಬಂಧುಗಳು ಹೇಗಿರುವರು ಎಂಬುದನ್ನು ದುಃಖವೊದಗಿದಾಗಲೂ ಪರೀಕ್ಷಿಸಬೇಕು.

೭೩ ಅ॥ ಅಪರಂ ಚ = ಮತ್ತೂ, ಉತ್ಸವೇ = ಉತ್ಸವದ ಸಮಯದಲ್ಲಿ, ವ್ಯಸನೇ = ದುಃಖದಲ್ಲಿ, ದುರ್ಭಿಕ್ಷೇ = ಬರಗಾಲದಲ್ಲಿ, ರಾಷ್ಟ್ರವಿಪ್ಲವೇ = ರಾಜ್ಯದ ತೊಂದರೆಯಲ್ಲಿ, ರಾಜದ್ವಾರೇ = ಅರಮನೆಯ ಬಾಗಿಲಿನಲ್ಲಿ, ಶ್ಮಶಾನೇ ಚ = ಸ್ಮಶಾನದಲ್ಲಿಯೂ, ಯಃ = ಯಾವನು, ತಿಷ್ಠತಿ = ಬೆಂಬಲನಾಗಿರುವನೊ, ಸಃ = ಅವನು, ಬಾಂಧವಃ = ಬಂಧುವು.

ತಾ॥ ಸುಖ ದುಃಖ, ಕ್ಷಾಮಕಾಲ, ದೇಶಕ್ಷೋಭೇ (ದೇಶದ ತೊಂದರೆ) ಅರಮನೆಯ ಬಾಗಿಲು, ಶವಸಂಸ್ಕಾರ ಮಾಡುವ ಸ್ಥಳ ಇವುಗಳಲ್ಲಿ ಕಷ್ಟ ಸುಖಗಳಲ್ಲಿ ಬೆಂಬಲನಾಗಿರುವವನೇ ಬಂಧುವು.

೭೮ ಅ॥ ಜಂಬುಕಃ = ನರಿಯು, ಮುಹುಃ ಮುಹುಃ = ಬಾರಿಬಾರಿಗೂ, ಪಾಶಂ = ಹಗ್ಗದ ಗಂಟನ್ನು, ವಿಲೋಕ್ಯ = ನೋಡಿ, ಅಚಿಂತಯತ್ = ಆಲೋಚಿಸಿತು. ಅಯಂ ಬಂಧಃ = ಈ ಕಟ್ಟು, ದೃಢಃ ತಾವತ್ = ಘಟ್ಟಿಯಾದುದು. ಬ್ರೂತೇ ಚ = ಹೇಳುತ್ತದೆ, ಸಖೇ = ಸ್ನೇಹಿತನೆ, ಏತಾಃ = ಈ, ಪಾಶಾಃ = ಗಂಟುಗಳು, ಸ್ನಾಯು ನಿರ್ಮಿತಾಃ = ನರಗಳಿಂದ ಮಾಡಲ್ಪಟ್ಟವು. ತತ್ = ಆದ್ದರಿಂದ, ಅದ್ಯ = ಈ ದಿನ, ಭಟ್ಟಾರಕವಾರೇ = ಭಾನುವಾರದಲ್ಲಿ,

ಸೂರ್ಯನಿಗೆ ಶ್ರೇಷ್ಠವಾದ ವಾರ

कथमेतान् दन्तैः स्पृशामि । मित्र, यदि चित्ते नान्यथा मन्यसे तदा प्रभाते यत्त्वया वक्तव्यं तत्कर्तव्यम् ।' इत्युक्त्वा तत्समीप आत्मानमाच्छाद्य स्थितः सः । अनन्तरं स काकः प्रदोषकाले मृगमनागतमवलोक्य इतस्ततः अन्विष्य तथाविधं दृष्ट्वोवाच—'सखे, किमेतत् ।' मृगेणोक्तम् 'अवधीरितसुहृद्वाक्यस्य फलमेतत् । तथा चोक्तम्—

೭೭. **सुहृदां हितकामानां यः शृणोति न भाषितम् ।**
**विपत्सन्निहिता तस्य स नरः शत्रुनन्दनः ' ॥ ७४ ॥**

---

ಏತಾನ್ = ಇವುಗಳನ್ನು, ದಂತೈಃ = ಹಲ್ಲುಗಳಿಂದ, ಕಥಂ = ಹೇಗೆ, ಸ್ಪೃಶಾಮಿ = ಮುಟ್ಟುತ್ತೇನೆ. ಮಿತ್ರ = ಸ್ನೇಹಿತನೆ, ಚಿತ್ತೇ = ಮನಸ್ಸಿನಲ್ಲಿ, ಅನ್ಯಥಾ = ಬೇರೆ ವಿಧವಾಗಿ, ಯದಿ ನ ಮನ್ಯಸೇ = ತಿಳಿಯದೆ ಇದ್ದರೆ, ತದಾ = ಆಗ, ಪ್ರಭಾತೇ = ಬೆಳಿಗ್ಗೆ, ತ್ವಯಾ = ನಿನ್ನಿಂದ, ಯತ್ = ಯಾವುದು, ವಕ್ತವ್ಯಂ = ಹೇಳತಕ್ಕದ್ದೋ, ತತ್ = ಅದು, ಕರ್ತವ್ಯಂ = ಮಾಡತಕ್ಕದು. ಇತಿ ಉಕ್ತ್ವಾ = ಹೀಗೆ ಹೇಳಿ, ಸಃ = ಆ ನರಿಯು, ತತ್ಸಮೀಪೇ = ಆ ಜಿಂಕೆಯ ಹತ್ತಿರದಲ್ಲಿ, ಆತ್ಮಾನಂ = ತನ್ನನ್ನು, ಆಚ್ಛಾದ್ಯ = ಅಡಗಿಸಿ ಕೊಂಡು, ಸ್ಥಿತಃ = ಇದ್ದಿತು. ಅನಂತರಂ = ಆ ಮೇಲೆ, ಸಃ = ಆ, ಕಾಕಃ = ಕಾಗೆಯು, ಪ್ರದೋಷಕಾಲೇ = ಸಾಯಂಕಾಲದಲ್ಲಿ, ಮೃಗಂ = ಜಿಂಕೆಯನ್ನು, ಅನಾಗತಂ = ಬಾರದೆ ಇರುವುದನ್ನಾಗಿ, ಅವಲೋಕ್ಯ = ನೋಡಿ, ಇತಃ ತತಃ = ಇತ್ತ ಅತ್ತ, ಅನ್ವಿಷ್ಯ = ಹುಡುಕಿ, ತಥಾವಿಧಂ = ಆ ರೀತಿ ಬಂಧನದಲ್ಲಿರು ವುದನ್ನು, ದೃಷ್ಟ್ವಾ = ನೋಡಿ, ಉವಾಚ = ಹೇಳಿತು. ಸಖೇ = ಸ್ನೇಹಿತನೆ! ಏತತ್ = ಇದು, ಕಿಂ = ಏನು ? ಮೃಗೇಣ = ಜಿಂಕೆಯಿಂದ, ಉಕ್ತಂ = ಹೇಳಲ್ಪಟ್ಟಿತು. ಅವಧೀರಿತ = ತಿರಸ್ಕಾರ ಮಾಡಲ್ಪಟ್ಟ, ಸುಹೃದ್ವಾಕ್ಯಸ್ಯ = ಮಿತ್ರನ ಮಾತಿನ, ಫಲಂ = ಫಲವು, ಏತತ್ = ಇದು. ತಥಾ ಚ = ಹಾಗೆಯೇ, ಉಕ್ತಂ = ಹೇಳಲ್ಪಟ್ಟಿದೆ—

೭೭. ಅ॥ ಹಿತಕಾಮಾನಾಂ = ಇಷ್ಟವನ್ನು ಬಯಸುವ, ಸುಹೃದಾಂ =

೨೮. काको ब्रूते—'स वञ्चकः क्वास्ते ।' मृगेणोक्तम्—'मन्मांसार्थी तिष्ठत्यत्रैव ।' काको ब्रूते—'उक्तमेव मया पूर्वम् ।

೨೯. अपराधो न मेऽस्तीति नैतद्विश्वासकारणम् ।
विद्यते हि नृशंसेभ्यो भयं गुणवतामपि ॥ ७५ ॥

---

ಸ್ನೇಹಿತರ, ಭಾಷಿತಂ=ಮಾತನ್ನು, ಯಃ=ಯಾವನು, ನ ಶೃಣೋತಿ=ಕೇಳುವುದಿಲ್ಲವೊ. ತಸ್ಯ=ಅವನಿಗೆ, ವಿಪತ್=ಕಷ್ಟವು, ಸನ್ನಿಹಿತಾ=ಸಮೀಪಿಸಿರುವುದು. ಸ ನರಃ=ಆ ಮನುಷ್ಯನು, ಶತ್ರುನಂದನಃ=ಶತ್ರುಗಳನ್ನು ಸಂತೋಷಪಡಿಸುವನು.

ತಾ॥ ಯಾವ ಮನುಷ್ಯನು ತನಗೆ ಹಿತವನ್ನು ಬಯಸುವ ಸ್ನೇಹಿತರ ಮಾತನ್ನು ಕೇಳುವುದಿಲ್ಲವೊ, ಅವನಿಗೆ ಅವಶ್ಯವಾಗಿ ಆಪತ್ತು ಉಂಟಾಗುವುದು. ಆದರಿಂದವನ ಶತ್ರುಗಳು ಸಂತೋಷಪಡುವರು.

೨೮. ಅ॥ ಕಾಕಃ ಬ್ರೂತೇ=ಕಾಗೆಯು ಹೇಳುತ್ತದೆ. ಸಃ ವಂಚಕಃ=ಆ ನರಿಯು, ಕ್ವ=ಎಲ್ಲಿ, ಆಸ್ತೇ=ಇದೆ. ಮೃಗೇಣ=ಜಿಂಕೆಯಿಂದ, ಉಕ್ತಂ=ಹೇಳಲ್ಪಟ್ಟಿತು. ಮತ್=ನನ್ನ, ಮಾಂಸಾರ್ಥೀ=ಮಾಂಸವನ್ನು ಅಪೇಕ್ಷಿಸುವುದಾಗಿ, ಅತ್ರ ಏವ=ಇಲ್ಲಿಯೇ, ತಿಷ್ಠತಿ=ಇದೆ. ಕಾಕಃ ಬ್ರೂತೇ–ಮಯಾ=ನನ್ನಿಂದ, ಪೂರ್ವಂ ಏವ=ಮೊದಲೇ, ಉಕ್ತಂ=ಹೇಳಲ್ಪಟ್ಟದೆ.

೨೯. ಅ॥ ಮೇ=ನನ್ನ, ಅಪರಾಧಃ=ತಪ್ಪು, ನಾಸ್ತೀತಿ=ಇಲ್ಲವೆಂಬ ಮಾತು, ವಿಶ್ವಾಸಕಾರಣಂ=ನಂಬಿಕೆಗೆ ಕಾರಣವಾದುದು, ನ=ಅಲ್ಲ. ಹಿ=ಯಾವ ಕಾರಣದಿಂದ, ಗುಣವತಾಂ ಅಪಿ=ಗುಣಶಾಲಿಗಳಿಗೂ, ನೃಶಂಸೇಭ್ಯಃ=ಹಿಂಸಕರಿಂದ, ಭಯಂ=ಹೆದರಿಕೆಯು, ವಿದ್ಯತೇ=ಇದೆ.

ತಾ॥ ದುಷ್ಟನು ನನ್ನಲ್ಲಿ ದೋಷವಿಲ್ಲವೆಂದಕೂಡಲೆ ಅವನನ್ನು ನಂಬಬಾರದು. ಗುಣಶಾಲಿಗಳಿಗೂ ಘಾತುಕರಿಂದ ಅಪಾಯವುಂಟಾಗುವುದು.

೩೦. दीपनिर्वाणगन्धं च सुहृद्वाक्यमरुन्धतीम् ।
न जिघ्रन्ति न शृण्वन्ति न पश्यन्ति गतायुषः ॥ ७६ ॥

೩೧. परोक्षे कार्यहन्तारं प्रत्यक्षे प्रियवादिनम् ।
वर्जयेत्तादृशं मित्रं विषकुम्भं पयोमुखम् ॥ ७७ ॥

೩೨. ततः काको दीर्घं निश्वस्य 'अरे वञ्चक, किं त्वया पापकर्मणा कृतम् । यतः ।

---

೩೦. ಅ॥ ಗತಾಯುಷಃ = ಆಯುಷ್ಯವಿಲ್ಲದವರು, ದೀಪ = ದೀಪದ, ನಿರ್ವಾಣ=ಆರುವಿಕೆಯಿಂದುಂಟಾದ, ಗಂಧಂ = ವಾಸನೆಯನ್ನು, ನ ಜಿಘ್ರಂತಿ =ವಾಸನೆ ನೋಡುವುದಿಲ್ಲ. ಸುಹೃದ್ವಾಕ್ಯಂ=ಸ್ನೇಹಿತನ ಮಾತನ್ನು, ನ ಶೃಣ್ವಂತಿ = ಕೇಳುವುದಿಲ್ಲ. ಚ=ಮತ್ತು, ಅರುಂಧತೀಂ = ಆಕಾಶದಲ್ಲಿರುವ ಅರುಂಧತೀ ನಕ್ಷತ್ರವನ್ನು, ನ ಪಶ್ಯಂತಿ = ನೋಡುವುದಿಲ್ಲ.

ತಾ॥ ಸಾಯುವ ಸ್ಥಿತಿಯಲ್ಲಿರುವ ಮಾನವರಿಗೆ ದೀಪವು ಆರಿದಾಗ ಉಂಟಾಗುವ ವಾಸನೆಯು ಗೊತ್ತಾಗುವುದಿಲ್ಲ. ಮಿತ್ರರ ಮಾತು ಹಿಡಿಸುವುದಿಲ್ಲ. ಆಕಾಶದಲ್ಲಿ ಸಪ್ತರ್ಷಿ ಮಂಡಲದಲ್ಲಿ ವಸಿಷ್ಠರ ಹತ್ತಿರವಿರುವ ಅರುಂಧತೀ ನಕ್ಷತ್ರವು ತೋರುವುದಿಲ್ಲ.

೩೧. ಅ॥ ಪರೋಕ್ಷೇ = ಕಾಣದಿರುವ ಹಿಂಭಾಗದಲ್ಲಿ, ಕಾರ್ಯಹಂತಾರಂ = ಕೆಲಸವನ್ನು ಹಾಳುಮಾಡುವ, ಪ್ರತ್ಯಕ್ಷೇ = ಮುಂಭಾಗದಲ್ಲಿ, ಪ್ರಿಯವಾದಿನಂ = ಹಿತವನ್ನಾಡುವ, ತಾದೃಶಂ = ಅಂತಹ, ಪಯೋಮುಖಂ = ಮೇಲೆಬಾಯಿಯಲ್ಲಿ ಹಾಲಿರುವ, ವಿಷಕುಂಭಂ = ವಿಷದ ಗಡಿಗೆಯ ರೂಪನಾದ, ಮಿತ್ರಂ = ಸ್ನೇಹಿತನನ್ನು, ವರ್ಜಯೇತ್ = ಬಿಡಬೇಕು.

ತಾ॥ ನಾವು ಕಾಣದಿರುವಾಗ ಕೆಲಸವನ್ನು ಕೆಡಿಸುವ, ನೋಡುತ್ತಿರುವಾಗ ಹಿತವಾದ ಮಾತನ್ನಾಡುವ ಸ್ನೇಹಿತನನ್ನು, ಒಳಗೆ ವಿಷ ತುಂಬಿಕೊಂಡು ಮೇಲ್ಭಾಗದಲ್ಲಿ ಮಾತ್ರ ಹಾಲಿರುವ ಗಡಿಗೆಯಂತೆ ತ್ಯಜಿಸಬೇಕು.

೩೨. ಅ॥ ತತಃ = ತರುವಾಯ, ಕಾಕಃ = ಕಾಗೆಯು, ದೀರ್ಘಂ = ನೀಳ

೩೩. संलापितानां मधुरैर्वचोभिः
मिथ्योपचारैश्च वशीकृतानाम् ।
आशावतां श्रद्दधतां च लोके
किमर्थिनां वञ्चयितव्यमस्ति ॥ ७८ ॥

೩೪. उपकारिणि विश्रब्धे शुद्धमतौ यः समाचरति पापम् ।
तं जनमसत्यसन्धं भगवति वसुधे कथं वहसि ॥ ७९ ॥

---

ವಾಗಿ, ನಿಶ್ವಸ್ಯ=ಉಸಿರುಬಿಟ್ಟು, ಅರೇ ವಂಚಕ=ಎಲೈ ನರಿಯೆ, ಪಾಪ-ಕರ್ಮಣಾ=ಪಾಪದ ಕೆಲಸವುಳ್ಳ, ತ್ವಯಾ=ನಿನ್ನಿಂದ, ಕಿಂ=ಏನು, ಕೃತಂ=ಮಾಡಲ್ಪಟ್ಟಿತು. ಯತಃ=ಯಾವ ಕಾರಣದಿಂದ.

೩೩. ಅ॥ ಮಧುರೈಃ = ಸವಿಯಾದ, ವಚೋಭಿಃ = ಮಾತುಗಳಿಂದ, ಸಂಲಾಪಿತಾನಾಂ = ಮಾತಾಡಿಸಲ್ಪಟ್ಟ, ಮಿಥ್ಯೋಪಚಾರೈಶ್ಚ = ಸುಳ್ಳು ಉಪಚಾರಗಳಿಂದ, ವಶೀಕೃತಾನಾಂ = ಸ್ವಾಧೀನ ಮಾಡಿಕೊಳ್ಳಲ್ಪಟ್ಟ, ಆಶಾವತಾಂ=ಆಶೆಯುಳ್ಳ, ಶ್ರದ್ದಧತಾಂ=ನಂಬುತ್ತಿರುವ, ಅರ್ಥಿನಾಂ=ಯಾಚಕರಿಗೆ, ಲೋಕೇ=ಪ್ರಪಂಚದಲ್ಲಿ, ವಂಚಯಿತವ್ಯಂ=ಮೋಸಮಾಡತಕ್ಕದ್ದು, ಅಸ್ತಿ ಕಿಂ=ಇದೆಯೇನು ?

ತಾ॥ ಬೇಡುವವರು ಬಂದಾಗ ಅವರನ್ನು ಸವಿನುಡಿಗಳಿಂದ ಮಾತಾಡಿಸಿ ಸುಳ್ಳು ಉಪಚಾರಗಳಿಂದ ತಮ್ಮ ಅಧೀನರನ್ನಾಗಿ ಮಾಡಿಕೊಂಡು ತಮ್ಮನ್ನು ನಂಬಿ ಏನಾದರೂ ಇವರು ಕೊಡುತ್ತಾರೆ ಎಂದು ತಿಳಿದಿರುವ ಅವರನ್ನು ಮೋಸ ಮಾಡಬಾರದು.

೩೪. ಅ॥ ಭಗವತಿ = ಪೂಜ್ಯಳಾದ, ವಸುಧೇ = ಭೂಮಿದೇವಿಯೇ ! ಯಃ=ಯಾವನು, ಉಪಕಾರಿಣಿ=ಉಪಕಾರಮಾಡುವ,ವಿಶ್ರಬ್ಧೇ=ನಂಬಿಕೆಯುಳ್ಳ, ಶುದ್ಧಮತೌ=ಶುದ್ಧವಾದ ಮನಸ್ಸುಳ್ಳ ಸಜ್ಜನನಲ್ಲಿ, ಪಾಪಂ=ಪಾಪದ ಕಲಸವನ್ನು, ಸಮಾಚರತಿ=ಮಾಡುತ್ತಾನೊ, ಅಸತ್ಯಸಂಧಂ=

೩೫. दुर्जनेन समं सख्यं प्रीतिं चापि न कारयेत् ।
उष्णो दहति चाङ्गारः शीतः कृष्णायते करम् ॥ ८० ॥

೩೬. अथ वा स्थितिरियं दुर्जनानाम् ।

೩೭. प्राक्पादयोः पतति खादति पृष्ठमांसं
कर्णे कलं किमपि रौति शनैर्विचित्रम् ।

---

ಸುಳ್ಳು ಪ್ರತಿಜ್ಞೆಯುಳ್ಳ, ತಂ=ಆ, ಜನಂ=ಮನುಷ್ಯನನ್ನು, ಕಥಂ= ಹೇಗೆ, ವಹಸಿ=ಹೊರುತ್ತೀಯೆ.

ತಾ॥ ಪೂಜ್ಯಳಾದ ಭೂದೇವಿಯೆ! ಉಪಕಾರವನ್ನು ಮಾಡುವವನೂ, ಶುದ್ಧಬುದ್ಧಿಯುಳ್ಳವನೂ ಆದ ಸಜ್ಜನನಿಗೆ ಕೆಟ್ಟುದನ್ನು ಮಾಡುವ ಮಾತಿಗೆ ತಪ್ಪುವ ದುಷ್ಟನನ್ನು ಹೇಗೆ ನಿನ್ನ ಮಡಲಿನಲ್ಲಿಟ್ಟುಕೊಳ್ಳುವಿ.

೩೫. ಅ॥ ದುರ್ಜನೇನ ಸಮಂ=ದುಷ್ಟನೊಡನೆ, ಸಖ್ಯಂ=ಸ್ನೇಹ ವನ್ನು, ಅಪಿ ಚ=ಮತ್ತು, ಪ್ರೀತಿಂ=ಪ್ರೀತಿಯನ್ನು, ನ ಕಾರಯೇತ್= ಮಾಡಕೂಡದು. ಉಷ್ಣಃ=ಬಿಸಿಯಾದ, ಅಂಗಾರಃ=ಕೆಂಡವು, ದಹತಿ =ಸುಡುತ್ತದೆ, ಚ=ಮತ್ತು, ಶೀತಃ = ತಣ್ಣಗಿರುವುದಾಗಿ, ಕರಂ= ಕೈಯನ್ನು, ಕೃಷ್ಣಾಯತೇ=ಕಪ್ಪುಮಾಡುತ್ತದೆ.

ತಾ॥ ಬೆಂಕಿಯ ಕೆಂಡವು ಬೆಂಕಿಯಿರುವಾಗ ಮುಟ್ಟಿದರೆ ಸುಡುತ್ತದೆ. ನೀರನ್ನು ಹಾಕಿ ತಣ್ಣಗೆ ಮಾಡಿದಾಗ ಮುಟ್ಟಿದರೆ ಕೈಯನ್ನು ಕಪ್ಪು ಮಾಡುತ್ತದೆ. ಹಾಗೆಯೇ ಎಲ್ಲ ರೀತಿಯಿಂದಲೂ ಕೆಟ್ಟವನಾದ ದುಷ್ಟನೊಡನೆ ಸ್ನೇಹ ಮತ್ತು ಪ್ರೀತಿಯನ್ನು ಮಾಡಬಾರದು

೩೬ ಅ॥ ಅಥ ವಾ=ಹಾಗಲ್ಲದ ಪಕ್ಷಕ್ಕೆ, ಇಯಂ=ಈ ಮುಂದೆ ಹೇಳುವುದು, ದುರ್ಜನಾನಾಂ=ದುಷ್ಟರ, ಸ್ಥಿತಿಃ=ರೀತಿಯು.

೩೭. ಅ॥ ಮಶಕಃ=ಸೊಳ್ಳೆಯು, ಪ್ರಾಕ್=ಮೊದಲು, ಪಾದಯೋಃ =ಕಾಲುಗಳಲ್ಲಿ, ಪತತಿ=ಬೀಳುತ್ತದೆ. ಪೃಷ್ಠಮಾಂಸಂ=ಬೆನ್ನಿನ ಮಾಂಸ

छिद्रं निरूप्य सहसा प्रविशत्यशङ्कः
सर्वं खलस्य चरितं मशकः करोति ॥ ८१ ॥

೩೮. दुर्जनः प्रियवादी च नैतद्विश्वासकारणम् ।
मधु तिष्ठति जिह्वाग्रे हृदि हालाहलं विषम् ॥ ८२ ॥

---

ವನ್ನು, ಖಾದತಿ=ತಿನ್ನುತ್ತದೆ. ಕರ್ಣೇ=ಕಿವಿಯಲ್ಲಿ, ಕಲಂ=ಇಂಪಾಗಿ, ಶನೈಃ=ಮೆಲ್ಲನೆ, ವಿಚಿತ್ರಂ=ಆಶ್ಚರ್ಯಕರವಾಗಿ, ಕಿಮಪಿ=ಏನನ್ನೊ, ರೌತಿ =ಕೂಗುತ್ತದೆ. ಛಿದ್ರಂ=ರಂಧ್ರವನ್ನು, ನಿರೂಪ್ಯ=ನೋಡಿ, ಸಹಸಾ =ಕೂಡಲೆ, ಅಶಂಕಃ = ಭಯವಿಲ್ಲದೆ, ಪ್ರವಿಶತಿ = ಒಳಹೊಗ್ಗುತ್ತದೆ. ಖಲಸ್ಯ=ದುಷ್ಟನ, ಸರ್ವಂ=ಎಲ್ಲ, ಚರಿತಂ=ನಡತೆಯನ್ನು, ಕರೋತಿ =ಮಾಡುತ್ತದೆ.

ತಾ॥ ಸೊಳ್ಳೆಯು ಮೊದಲು ಕಾಲುಗಳ ಮೇಲೆ ಕೂತುಕೊಳ್ಳುವುದು. ಅನಂತರ ಬೆನ್ನಿನಲ್ಲಿರುವ ಮಾಂಸವನ್ನು ತಿನ್ನುವುದು. ಬಳಿಕ ಕಿವಿಯ ಹತ್ತಿರ ಆಶ್ಚರ್ಯಕರವಾಗಿ ಏನನ್ನೋ ಹೇಳುವಂತೆ ಇಂಪಾಗಿ ಕೂಗುವುದು. ಎಲ್ಲಿಯಾದರೂ ಅವಕಾಶ ಸಿಕ್ಕಿದರೆ ಹೆದರಿಕೆಯಿಲ್ಲದೆ ಒಳಗೆ ಪ್ರವೇಶಮಾಡವುದು. ಹಾಗೆಯೇ ದುಷ್ಟನು ಮೊದಲು ಕಾಲಿಗೆ ಎರಗುತ್ತಾನೆ. ಅನಂತರ ಹಿಂದಿನಿಂದ ಕೆಟ್ಟದ್ದನ್ನು ಮಾಡುತ್ತಾನೆ. ಕಿವಿಯಲ್ಲಿ ಏನನ್ನೊ ಹಿತವಾಗುವಂತೆ ಮಾತಾಡುತ್ತಾನೆ. ಅವಕಾಶ ಸಿಕ್ಕಿದರೆ ಪೂರ್ತಿ ವಶಮಾಡಿಕೊಂಡು ಹೆದರಿಕೆಯಿಲ್ಲದೆ ಅನಿಷ್ಟವನ್ನುಂಟುಮಾಡುತ್ತಾನೆ.

೩೮. ಅ॥ ದುರ್ಜನಃ ಚ = ದುಷ್ಟನೂ, ಪ್ರಿಯವಾದೀ = ಹಿತವಾಗಿ ಮಾತಾಡುವನು. ಏತತ್=ಇದು, ವಿಶ್ವಾಸಕಾರಣಂ=ನಂಬಿಕೆಗೆ ಕಾರಣವು, ನ=ಅಲ್ಲ. ಜಿಹ್ವಾಗ್ರೇ=ನಾಲಿಗೆಯ ತುದಿಯಲ್ಲಿ, ಮಧು=ಜೇನು, ತಿಷ್ಠತಿ=ಇರುವುದು. ಹೃದಿ=ಮನಸ್ಸಿನಲ್ಲಿ, ಹಾಲಾಹಲಂ ವಿಷಂ=ಕಾಲಕೂಟ ವಿಷವಿರುವುದು.

ತಾ॥ ದುಷ್ಟನು ಹಿತವಾಗಿ ಮಾತಾಡುತ್ತಾನೆಂದು ಅವನನ್ನು ನಂಬ

३९. अथ प्रभाते क्षेत्रपतिर्लगुडहस्तस्तं प्रदेशमागच्छन् काकेनावलोकितः। तमालोक्य काकेनोक्तम्–'सखे मृग त्वमात्मानं मृतवत्सन्दर्श्य वातेनोदरं पूरयित्वा पादान्स्तब्धीकृत्य तिष्ठ। यदाहं शब्दं करोमि तदा त्वमुत्थाय सत्वरंपलायिष्यसि।' मृगस्तथैव काकवचनेन स्थितः। ततः क्षेत्रपतिना हर्षोत्फुल्ललोचनेन तथाविधो मृग आलोकितः। 'आः, स्वयं

---

ಕೂಡದು. ಅವನು ಬಾಯಿಯಲ್ಲಿ ಮಾತ್ರ ಜೇನಿನಂತೆ ಸವಿಯಾಗಿ ಮಾತಾಡುತ್ತಾನೆ. ಅವನ ಮನಸ್ಸಿನಲ್ಲಿ ವಿಷದಂತೆ ಕೆಟ್ಟ ವಿಷಯಗಳು ತುಂಬಿರುತ್ತವೆ.

೩೯. ಅ॥ ಅಥ=ಅನಂತರ, ಪ್ರಭಾತೇ=ಬೆಳಗ್ಗೆ, ಲಗುಡಹಸ್ತಃ=ಕೈಯಲ್ಲಿ ದೊಣ್ಣೆಯುಳ್ಳ, ತಂ=ಆ, ಪ್ರದೇಶಂ=ಸ್ಥಳಕ್ಕೆ, ಆಗಚ್ಛನ್=ಬರುತ್ತಿರುವ, ಕ್ಷೇತ್ರಪತಿಃ=ಹೊಲದ ಒಡೆಯನು, ಕಾಕೇನ=ಕಾಗೆಯಿಂದ, ಅವಲೋಕಿತಃ=ನೋಡಲ್ಪಟ್ಟನು. ತಂ=ಅವನನ್ನು, ಆಲೋಕ್ಯ=ನೋಡಿ ಕಾಕೇನ=ಕಾಗೆಯಿಂದ, ಉಕ್ತಂ=ಹೇಳಲ್ಪಟ್ಟಿತು. ಸಖೇ=ಸ್ನೇಹಿತನಾದ, ಮೃಗ=ಜಿಂಕೆಯೇ, ತ್ವಂ=ನೀನು, ಆತ್ಮಾನಂ=ನಿನ್ನನ್ನು, ಮೃತವತ್=ಸತ್ತವನಂತೆ, ಸಂದರ್ಶ್ಯ=ತೋರಿಸಿ, ವಾತೇನ=ಗಾಳಿಯಿಂದ, ಉದರಂ=ಹೊಟ್ಟೆಯನ್ನು, ಪೂರಯಿತ್ವಾ=ತುಂಬಿಕೊಂಡು, ಪಾದಾನ್=ಕಾಲುಗಳನ್ನು, ಸ್ತಬ್ಧೀಕೃತ್ಯ=ಅಲ್ಲಾಡದಂತೆ ಇಟ್ಟುಕೊಂಡು, ತಿಷ್ಠ=ಇರು. ಅಹಂ=ನಾನು, ಯದಾ=ಯಾವಾಗ, ಶಬ್ದಂ ಕರೋಮಿ=ಶಬ್ದ ಮಾಡುತ್ತೇನೊ, ತದಾ=ಆಗ, ತ್ವಂ=ನೀನು, ಉತ್ಥಾಯ=ಎದ್ದು, ಸತ್ವರಂ=ವೇಗವಾಗಿ, ಪಲಾಯಿಷ್ಯಸಿ=ಓಡುವಿ. ಮೃಗಃ=ಜಿಂಕೆಯು, ಕಾಕವಚನೇನ=ಕಾಗೆಯ ಮಾತಿನಿಂದ, ತಥಾ ಏವ=ಹಾಗೆಯೇ, ಸ್ಥಿತಃ=ಇದ್ದಿತು. ತತಃ=ಬಳಿಕ, ಹರ್ಷ=ಸಂತೋಷದಿಂದ, ಉತ್ಫುಲ್ಲಲೋಚನೇನ=ಅರಳಿದ ಕಣ್ಣುಗಳುಳ್ಳ, ಕ್ಷೇತ್ರಪತಿನಾ=ಹೊಲದ ಒಡೆಯನಿಂದ, ತಥಾವಿಧಃ=ಹಾಗಿರುವ, ಮೃಗಃ=ಜಿಂಕೆಯು, ಆಲೋಕಿತಃ=ನೋಡಲ್ಪಟ್ಟಿತು. ಆಃ=ಅಹಹ, ಸ್ವಯಂ=ನೀನಾಗಿ, ಮೃತಃ ಅಸಿ=ಸತ್ತಿರುವಿಯೊ? ಇತಿ

मृतोऽसि' इत्युक्त्वा मृगं बन्धनान्मोचयित्वा पाशान् ग्रहीतुं सयत्नो बभूव। ततः काकशब्दं श्रुत्वा मृगः सत्वरमुत्थाय पलायितः। तमुद्दिश्य तेन क्षेत्रपतिना क्षिप्तेन लगुडेन शृगालो हतः। तथा चोक्तम्—

೮೦. त्रिभिर्वर्षैस्त्रिभिः मासैस्त्रिभिः पक्षैस्त्रिभिर्दिनैः।
अत्युत्कटैः पापपुण्यैरिहैव फलमश्नुते ॥ ८३ ॥

---

ಉಕ್ತ್ವಾ = ಹೀಗೆಂದು ಹೇಳಿ, ಮೃಗಂ = ಜಿಂಕೆಯನ್ನು, ಬಂಧನಾತ್ = ಕಟ್ಟಿನಿಂದ, ಮೋಚಯಿತ್ವಾ = ಬಿಡಿಸಿ, ಪಾಶಾನ್ = ಹಗ್ಗಗಳನ್ನು, ಗ್ರಹೀತುಂ = ತೆಗೆದುಕೊಳ್ಳುವುದಕ್ಕೆ, ಸಯತ್ನಃ = ಪ್ರಯತ್ನದಿಂದ ಕೂಡಿದವನು, ಬಭೂವ = ಆದನು. ತತಃ = ಅನಂತರ, ಕಾಕಶಬ್ದಂ = ಕಾಗೆಯ ಶಬ್ದವನ್ನು, ಶ್ರುತ್ವಾ = ಕೇಳಿ, ಮೃಗಃ = ಜಿಂಕೆಯು, ಸತ್ವರಂ = ಬೇಗನೆ, ಉತ್ಥಾಯ = ಎದ್ದು, ಪಲಾಯಿತಃ = ಓಡಿತು. ತೇನ = ಆ, ಕ್ಷೇತ್ರಪತಿನಾ = ಹೊಲದ ಯಜಮಾನನಿಂದ, ತಂ = ಅದನ್ನು, ಉದ್ದಿಶ್ಯ = ಉದ್ದೇಶಿಸಿ, ಕ್ಷಿಪ್ತೇನ = ಎಸೆಯಲ್ಪಟ್ಟ, ಲಗುಡೇನ = ದೊಣ್ಣೆಯಿಂದ, ಶೃಗಾಲಃ = ನರಿಯು, ಹತಃ = ಕೊಲ್ಲಲ್ಪಟ್ಟಿತು. ತಥಾ ಚ ಉಕ್ತಂ = ಹಾಗೆಯೇ ಹೇಳಲ್ಪಟ್ಟಿದೆ.

೮೦. ಅ॥ ಅತ್ಯುತ್ಕಟೈಃ = ಅತ್ಯಂತ ಹೆಚ್ಚಾದ, ಪಾಪಪುಣ್ಯೈಃ = ಪಾಪ ಮತ್ತು ಪುಣ್ಯಗಳಿಂದ, ತ್ರಿಭಿಃ ವರ್ಷೈಃ = ಮೂರು ವರ್ಷಗಳಿಂದ, ತ್ರಿಭಿಃ ಮಾಸೈಃ = ಮೂರು ತಿಂಗಳಿಂದ, ತ್ರಿಭಿಃ ಪಕ್ಷೈಃ = ಮೂರು ಪಕ್ಷಗಳಿಂದ, ತ್ರಿಭಿಃ ದಿನೈಃ = ಮೂರು ದಿನಗಳಿಂದ, ಇಹ ಏವ = ಈ ಲೋಕದಲ್ಲಿಯೇ, ಫಲಂ = ಫಲವನ್ನು, ಅಶ್ನುತೇ = ಅನುಭವಿಸುತ್ತಾನೆ.

ತಾ॥ ಅತ್ಯಂತ ಹೆಚ್ಚಾಗಿ ಪಾಪ ಪುಣ್ಯಗಳನ್ನು ಮಾಡಿದ್ದರೆ ಮಾನವನು ಅದರ ಫಲವನ್ನು ಮೂರು ವರ್ಷ, ಮೂರು ತಿಂಗಳು, ಮೂರು ಪಕ್ಷ, ಅಥವಾ ಮೂರು ದಿನಗಳಲ್ಲಿಯೇ ಪಡೆಯುವನು.

೪೧. अतोऽहं ब्रवीमि—'भक्ष्यभक्षकयोः प्रीतिः' इत्यादि ॥ काकः पुनराह—

೪೨. 'भक्षितेनापि भवता नाहारो मम पुष्कलः ।
त्वयि जीवति जीवामि चित्रग्रीव इवानघ ॥ ८४ ॥

೪೩. अन्यच्च ।
तिरश्चामपि विश्वासो दृष्टः पुण्यैककर्मणाम् ।
सतां हि साधुशीलत्वात्स्वभावो न निवर्तते ॥ ८५ ॥

---

೪೧. ಅ॥ ಅತಃ=ಈ ಕಾರಣದಿಂದ, ಅಹಂ=ನಾನು, ಬ್ರವೀಮಿ=ಹೇಳುತ್ತೇನೆ. ಭಕ್ಷ್ಯಭಕ್ಷಕಯೋಃ ಪ್ರೀತಿಃ ಇತ್ಯಾದಿ=ಭಕ್ಷ್ಯಭಕ್ಷಕರ ಸ್ನೇಹವು ಇತ್ಯಾದಿಯನ್ನು. ಕಾಕಃ ಪುನಃ=ಕಾಗೆಯು ತಿರುಗಿ, ಆಹ=ಹೇಳುತ್ತದೆ.

೪೨. ಅ॥ ಅನಘ = ದೋಷವಿಲ್ಲದ ಇಲಿಯೇ, ಭಕ್ಷಿತೇನ ಅಪಿ= ತಿನ್ನಲ್ಪಟ್ಟಾಗ್ಯೂ, ಭವತಾ=ನಿನ್ನಿಂದ, ಮಮ=ನನಗೆ, ಪುಷ್ಕಲಃ= ಪೂರ್ಣವಾದ, ಆಹಾರಃ=ಆಹಾರವು, ನ=ಆಗುವುದಿಲ್ಲ. ತ್ವಯಿ=ನೀನು ಜೀವತಿ=ಬದುಕಿರುವಾಗ, ಚಿತ್ರಗ್ರೀವಃ ಇವ=ಚಿತ್ರಗ್ರೀವನೆಂಬ ಪಾರಿವಾಳದಂತೆ, ಜೀವಾಮಿ=ಬದುಕುತ್ತೇನೆ.

ತಾ॥ ನಿರ್ದುಷ್ಟನಾದ ಇಲಿಯೆ ನಾನು ಸಣ್ಣವನಾದ ನಿನ್ನನ್ನು ತಿಂದರೂ ನನಗೆ ಅದರಿಂದ ಆಹಾರವು ಪೂರ್ತಿಗೊಂಡು ತೃಪ್ತಿಯಾಗುವುದಿಲ್ಲ. ನೀನು ಬದುಕಿದ್ದರೆ ಚಿತ್ರಗ್ರೀವನೆಂಬ ನಿನ್ನ ಸ್ನೇಹಿತನಾದ ಪಾರಿವಾಳದಂತೆ ನಿನ್ನೊಡನೆ ಸ್ನೇಹದಿಂದ ಬದುಕಿರುವೆನು.

೪೩. ಅ॥ ಪುಣ್ಯ=ಪುಣ್ಯವೇ, ಏಕಕರ್ಮಣಾಂ=ಮುಖ್ಯಕಾರ್ಯವಾಗುಳ್ಳ, ತಿರಶ್ಚಾಂ ಅಪಿ=ಪಶುಪಕ್ಷಿಗಳಲ್ಲಿಯೂ, ವಿಶ್ವಾಸಃ=ನಂಬಿಕೆಯು, ದೃಷ್ಟಃ= ನೋಡಲ್ಪಟ್ಟಿದೆ. ಸಾಧುಶೀಲತ್ವಾತ್=ಒಳ್ಳೆ ಸ್ವಭಾವವುಳ್ಳವರಾದ್ದರಿಂದ, ಸತಾಂ=ಸಜ್ಜನರ, ಸ್ವಭಾವಃ=ಸ್ವಭಾವವು, ನ ನಿವರ್ತತೇ=ಹೋಗುವುದಿಲ್ಲ.

೪೪. किं च ।

साधोः प्रकोपितस्यापि मनो नायाति विक्रियाम् ।
न हि तापयितुं शक्यं सागराम्भस्तृणोल्कया' ॥ ८६ ॥

೪೫. हिरण्यको ब्रूते—'चपलस्त्वम् । चपलेन सह स्नेहः सर्वथा न कर्तव्यः । तथा चोक्तम्—

೪೬. मार्जारो महिषो मेषः काकः कापुरुषस्तथा ।
विश्वासात्प्रभवन्त्येते विश्वासस्तत्र नोचितः ॥ ८७ ॥

---

ತಾ॥ ಒಳ್ಳೆ ಕಾರ್ಯವನ್ನು ಮಾಡುವ ಪಶುಪಕ್ಷಿಗಳೂ ಪರಸ್ಪರ ನಂಬಿಕೆಯಿಂದ ಬಾಳುತ್ತಿರುವುದನ್ನು ನೋಡಿದ್ದೇನೆ. ಸಜ್ಜನರು ಒಳ್ಳೆ ಸ್ವಭಾವವುಳ್ಳವರಾದ್ದರಿಂದ ಅವರ ಸ್ವಭಾವವು ವ್ಯತ್ಯಾಸವಾಗುವುದಿಲ್ಲ.

೪೪. ಅ॥ ಕಿಂ ಚ=ಮತ್ತು, ಪ್ರಕೋಪಿತಸ್ಯ ಅಪಿ=ಕೋಪಗೊಳಿಸಲ್ಪಟ್ಟವನಾದರೂ, ಸಾಧೋಃ=ಸಜ್ಜನನ, ಮನಃ=ಮನಸ್ಸು, ವಿಕ್ರಿಯಾಂ=ವಿಕಾರವನ್ನು, ನ ಆಯಾತಿ=ಹೊಂದುವುದಿಲ್ಲ, ಸಾಗರಾಂಭಃ=ಸಮುದ್ರದ ನೀರು, ತೃಣೋಲ್ಕಯಾ=ಹುಲ್ಲಿನ ಕೊಳ್ಳಿಯಿಂದ, ತಾಪಯಿತುಂ=ಕಾಯಿಸುವುದಕ್ಕೆ, ನ ಹಿ ಶಕ್ಯಂ=ಸಾಧ್ಯವಿಲ್ಲ.

ತಾ॥ ಹುಲ್ಲಿನ ಕಟ್ಟಿಗೆ ಬೆಂಕಿಹೊತ್ತಿಸಿ ಸಮುದ್ರದ ನೀರನ್ನು ಕಾಯಿಸಲು ಸಾಧ್ಯವಿಲ್ಲ. ಅದರಂತೆ ಕೋಪಬರುವಂತೆ ಮಾಡಿದರೂ ಸಜ್ಜನರ ಮನಸ್ಸು ವ್ಯತ್ಯಾಸವಾಗುವುದಿಲ್ಲ.

೪೫. ಅ॥ ಹಿರಣ್ಯಕಃ=ಹಿರಣ್ಯಕನು, ಬ್ರೂತೇ=ಹೇಳುತ್ತದೆ. ತ್ವಂ=ನೀನು, ಚಪಲಃ=ಚಂಚಲ ಸ್ವಭಾವದವನು. ಚಪಲೇನ ಸಹ=ಚಂಚಲನೊಡನೆ, ಸ್ನೇಹಃ=ಪ್ರೀತಿಯು, ಸರ್ವಥಾ=ಎಲ್ಲಾ ವಿಧದಿಂದಲೂ, ನ ಕರ್ತವ್ಯಃ=ಮಾಡತಕ್ಕದ್ದಲ್ಲ. ತಥಾ ಚ ಉಕ್ತಂ=ಹಾಗೆಯೇ ಹೇಳಲ್ಪಟ್ಟಿದೆ.

೪೬. ಅ॥ ಮಾರ್ಜಾರಃ=ಬೆಕ್ಕು, ಮಹಿಷಃ=ಕೋಣ, ಮೇಷಃ=ಟಗರು, ಕಾಕಃ=ಕಾಗೆ, ತಥಾ=ಹಾಗೆಯೇ, ಕಾಪುರುಷಃ=ದುಷ್ಟನು,

೪೭. किं चान्यत् शत्रुपक्षो भवानस्माकम् । उक्तं चैतत्—

೪೮. शत्रुणा न हि सन्दध्यात्सुश्लिष्टेनापि सन्धिना ।
सुतप्तमपि पानीयं शमयत्येव पावकम् ॥ ८८ ॥

೪೯. दुर्जनः परिहर्तव्यो विद्ययालङ्कृतोऽपि सन् ।
मणिना भूषितः सर्पः किमसौ न भयङ्करः ॥ ८९ ॥

---

ಏತೇ=ಇವರು, ವಿಶ್ವಾಸಾತ್=ನಂಬುವುದರಿಂದ, ಪ್ರಭವಂತಿ=ಸ್ನೇಹಿತ ರಾಗುತ್ತಾರೆ. ತತ್ರ=ಅವರಲ್ಲಿ, ವಿಶ್ವಾಸಃ=ನಂಬಿಕೆಯು, ನ ಉಚಿತಃ= ಯೋಗ್ಯವಲ್ಲ.

ತಾ॥ ಬೆಕ್ಕು, ಕೋಣ, ಟಗರು, ಕಾಗೆ, ದುಷ್ಟಮನುಷ್ಯ ಇವರು ನಂಬಿದರೆ ಸ್ನೇಹಿತರಾಗುವರು ಆದರೆ ಅವರನ್ನು ನಂಬಬಾರದು.

೪೭. ಅ॥ ಕಿಂ ಚ ಅನ್ಯತ್=ಇನ್ನೊಂದೇನೆಂದರೆ, ಭವಾನ್=ನೀನು, ಅಸ್ಮಾಕಂ=ನಮ್ಮ, ಶತ್ರುಪಕ್ಷಃ=ವೈರಿಯ ಕಡೆಯವನು. ಉಕ್ತಂ ಚ ಏತತ್=ಇದು ಹೇಳಲ್ಪಟ್ಟಿದೆ.

೪೮. ಅ॥ ಸುಶ್ಲಿಷ್ಟೇನ = ದೃಢವಾದ, ಸಂಧಿನಾ ಅಪಿ = ಸಂಧಾನ ದಿಂದಲೂ, ಶತ್ರುಣಾ=ಶತ್ರುವಿನೊಡನೆ, ನ ಹಿ ಸಂದಧ್ಯಾತ್=ಸಂಧಿಮಾಡಿ ಕೊಳ್ಳಕೂಡದು, ಪಾನೀಯಂ=ನೀರು, ಸುತಪ್ತಂ ಅಪಿ=ಅತ್ಯಂತ ಕಾದಿ ದ್ದರೂ, ಪಾವಕಂ=ಬೆಂಕಿಯನ್ನು, ಶಮಯತಿ ಏವ=ಆರಿಸಿಯೇ ಆರಿಸು ವುದು.

ತಾ॥ ನೀರನ್ನು ಚೆನ್ನಾಗಿ ಕಾಯಿಸಿ ಬಿಸಿಮಾಡಿದ್ದರೂ ಅದು ತನ್ನ ಸ್ವಭಾವದಂತೆ ಬೆಂಕಿಯನ್ನು ಆರಿಸುವುದು. ಆದರಂತೆ ಶತ್ರುವಿನೊಡನೆ ಸಂಧಿಮಾಡಿಕೊಂಡರೂ ಅವನಿಂದ ಅಪಾಯದ ಭಯವಿರುವುದರಿಂದ ಹಾಗೆ ಸಂಧಿಮಾಡಿಕೊಳ್ಳಕೂಡದು.

೪೯. ಅ॥ ವಿದ್ಯಯಾ = ವಿದ್ಯೆಯಿಂದ, ಅಲಂಕೃತಃ ಅಪಿ ಸನ್=

೫೦. **यदशक्यं न तच्छक्यं यच्छक्यं शक्यमेव तत् ।**
**नोदके शकटं याति न च नौर्गच्छति स्थले ॥ ९० ॥**

೫೧. **अपरं च ।**

**महताप्यर्थसारेण यो विश्वसिति शत्रुषु ।**
**भार्यासु च विरक्तासु तदन्तं तस्य जीवनम् ॥ ९१ ॥**

---

ಅಲಂಕಾರಗೊಂಡಿದ್ದರೂ, ದುರ್ಜನಃ = ದುಷ್ಟನು, ಪರಿಹರ್ತವ್ಯಃ = ಬಿಡ ಶಕ್ಕವನು. ಮಣಿನಾ = ರತ್ನದಿಂದ, ಭೂಷಿತಃ = ಅಲಂಕಾರಗೊಂಡ, ಅಸೌ ಸರ್ಪಃ = ಈ ಸರ್ಪವು, ಭಯಂಕರಃ = ಭಯವನ್ನುಂಟು ಮಾಡುವುದು, ನ ಕಿಂ = ಅಲ್ಲವೇನು.

ತಾ॥ ನಾಗರಹಾವು ರತ್ನದಿಂದ ಅಲಂಕಾರಗೊಂಡಿದ್ದರೂ ಹೆದರಿಕೆಯನ್ನುಂಟು ಮಾಡುವುದು. ಅದರಂತೆ ದುಷ್ಟನು ವಿದ್ವಾಂಸನಾಗಿದ್ದರೂ ನಂಬಿಕೆಗೆ ಯೋಗ್ಯನಲ್ಲವಾದ್ದರಿಂದ ಅವನನ್ನು ಬಿಟ್ಟುಬಿಡಬೇಕು.

೫೦. ಅ॥ ಯತ್ = ಯಾವುದು, ಅಶಕ್ಯಂ = ಅಸಾಧ್ಯವಾದುದೊ, ತತ್ = ಅದು, ಶಕ್ಯಂ = ಸಾಧ್ಯವಾದುದು, ನ = ಅಲ್ಲ. ಯತ್ = ಯಾವುದು, ಶಕ್ಯಂ = ಸಾಧ್ಯವಾದುದೊ, ತತ್ = ಅದು, ಶಕ್ಯಂ ಏವ = ಸಾಧ್ಯವಾದುದೇ. ಉದಕೇ = ನೀರಿನಲ್ಲಿ, ಶಕಟಂ = ಬಂಡಿಯು, ನ ಯಾತಿ = ಹೋಗುವುದಿಲ್ಲ. ನೌಃ = ಹಡಗು, ಸ್ಥಲೇ = ಭೂಮಿಯ ಮೇಲೆ, ನ ಚ ಗಚ್ಛತಿ = ಹೋಗುವುದಿಲ್ಲ.

ತಾ॥ ಗಾಡಿಯು ನೀರಿನಲ್ಲಿ ತೇಲಿ ಹೋಗುವುದಿಲ್ಲ ಹಡಗು ಭೂಮಿಯಲ್ಲಿ ಹೋಗುವುದಿಲ್ಲ. ಆದ್ದರಿಂದ ಯಾವುದು ಅಸಾಧ್ಯವಾದುದೊ ಅದು ಸಾಧ್ಯವಾಗುವುದಿಲ್ಲ. ಸಾಧ್ಯವಾಗುವುದು ಆಗಿಯೇ ಆಗುವುದು.

೫೧. ಅ॥ ಅಪರಂ ಚ = ಮತ್ತು, ಯಃ = ಯಾವನು, ಶತ್ರುಷು = ಶತ್ರುಗಳಲ್ಲಿ, ಚ = ಮತ್ತು, ವಿರಕ್ತಾಸು = ಅನುರಾಗವಿಲ್ಲದ, ಬಾರ್ಯಾಸು = ಹೆಂಡತಿಯರಲ್ಲಿಯೂ, ಮಹತಾ = ಹೆಚ್ಚಾದ, ಅರ್ಥಸಾರೇಣ ಅಪಿ = ಉತ್ಕೃಷ್ಟ ಹಣ

೫೨. लघुपतनको ब्रूते—'श्रुतं मया सर्वम् । तथापि मम चैतावान्सङ्कल्पस्त्वया सह सौहृद्यमवश्यं करणीयमिति । नो चेदनाहारेणात्मानं व्यापादयिष्यामि । तथा हि ।

೫೩. **मृद्घटवत्सुखभेद्यो दुःसन्धानश्च दुर्जनो भवति ।**
**सुजनस्तु कनकघटवद्दुर्भेद्यश्चाशु सन्धेयः ॥ ९२ ॥**

---

ದಿಂದಲೂ, ವಿಶ್ವಸಿತಿ = ನಂಬುತ್ತಾನೊ. ತಸ್ಯ = ಅವನ, ಜೀವನಂ = ಬದುಕು, ತದಂತಂ = ಆ ಹಣವು ಖರ್ಚಾಗುವುದೇ ಕೊನೆಯಾಗುಳ್ಳುದು.

ತಾ॥ ಶತ್ರುಗಳಿಗೂ, ತನ್ನಲ್ಲಿ ಪ್ರೀತಿಯಿಲ್ಲದ ಹೆಂಡತಿಯರಿಗೂ ಹೆಚ್ಚು ಹಣವನ್ನಿತ್ತು ನಂಬಿದರೂ ಆ ಹಣವು ಮುಗಿಯುವ ತನಕ ಅವರು ಅವನನ್ನು ಪ್ರೀತಿ ಮಾಡಿದಂತೆ ನಟಿಸಿ ಅನಂತರ ಕೈಬಿಡುವರು ಹಾಗೆ ನಂಬಿದವನು ಆ ಹಣ ಖರ್ಚಾಗುವವರೆಗೆ ಬದುಕುವನು. ಬಳಿಕ ಆ ಶತ್ರುಗಳೂ, ಪ್ರೀತಿಯಿಲ್ಲದ ಹೆಂಡತಿಯರೂ ಅವನ ಮರಣಕ್ಕೆ ಕಾರಣರಾಗುವರು.

೫೨. ಅ॥ ಲಘುಪತನಕಃ = ಲಘುಪತನಕನು, ಬ್ರೂತೇ = ಹೇಳುತ್ತಾನೆ. ಸರ್ವಂ = ಎಲ್ಲವೂ, ಮಯಾ = ನನ್ನಿಂದ, ಶ್ರುತಂ = ಕೇಳಲ್ಪಟ್ಟಿತು. ತಥಾ ಅಪಿ = ಹಾಗಾದರೂ, ಮಮ ಚ = ನನಗೆ, ತ್ವಯಾ ಸಹ = ನಿನ್ನೊಡನೆ, ಅವಶ್ಯಂ = ನಿಶ್ಚಯವಾಗಿಯೂ. ಸೌಹೃದ್ಯಂ = ಸ್ನೇಹವು, ಕರಣೀಯಂ = ಮಾಡಬೇಕು, ಇತಿ = ಹೀಗೆಂದು, ಏತಾವಾನ್ = ಇಷ್ಟು, ಸಂಕಲ್ಪಃ = ಮನಸ್ಸಿನ ಆಲೋಚನೆಯು. ನೋ ಚೇತ್ = ಇಲ್ಲದ ಪಕ್ಷಕ್ಕೆ, ಅನಾಹಾರೇಣ = ಉಪವಾಸದಿಂದ, ಆತ್ಮಾನಂ = ನನ್ನನ್ನು, ವ್ಯಾಪಾದಯಿಷ್ಯಾಮಿ = ಕೊಂದುಕೊಳ್ಳುವೆನು. ತಥಾ ಹಿ = ಹಾಗೆಯೇ.

೫೩. ಅ॥ ದುರ್ಜನಃ = ದುಷ್ಟನು, ಮೃದ್ಘಟವತ್ = ಮಣ್ಣಿನ ಮಡಿಕೆಯಂತೆ, ಸುಖಭೇದ್ಯಃ = ಸುಖವಾಗಿ ಒಡೆಯಲು ಯೋಗ್ಯನೂ, ದುಸ್ಸಂಧಾನಶ್ಚ = ಒಟ್ಟುಕೂಡಿಸಲಶಕ್ಯನೂ, ಭವತಿ = ಆಗುತ್ತಾನೆ. ಸುಜನಃ ತು = ಸಜ್ಜನನಾದರೊ, ಕನಕಘಟವತ್ = ಚಿನ್ನದ ಮಡಿಕೆಯಂತೆ, ದುರ್ಭೇದ್ಯಃ = ಒಡೆಯಲಶಕ್ಯನು ಆಶು = ಬೇಗನೆ, ಸಂಧೇಯಃ = ಒಟ್ಟು ಕೂಡಿಸಲು ಶಕ್ಯನು.

೫೪. किं च ।

द्रवत्वात्सर्वलोहानां निमित्तान्मृगपक्षिणाम् ।
भयाल्लोभाच्च मूर्खाणां सङ्गतं दर्शनात्सताम् ॥ ९३ ॥

೫೫. किं च ।

नारिकेलसमाकारा दृश्यन्ते हि सुहृज्जनाः ।
अन्ये बदरिकाकारा बहिरेव मनोहराः ॥ ९४ ॥

---

ತಾ॥ ಮಣ್ಣಿನ ಮಡಿಕೆಯು ಬೇಗನೆ ಒಡೆಯುವುದು. ಅನಂತರ ಕೂಡಿಸಲು ಸಾಧ್ಯವಾಗುವುದಿಲ್ಲ. ಅದರಂತೆ ದುಷ್ಟನು ಬೇಗನೆ ದ್ವೇಷಿಯಾಗುವನು. ಬಳಿಕ ಸಮಾಧಾನ ಮಾಡಲಶಕ್ಯನು. ಚಿನ್ನದ ಮಡಿಕೆಯು ಒಡೆಯುವುದಿಲ್ಲ. ಒಡೆದರೂ ಸೇರಿಸಬಹುದು. ಹಾಗೆಯೇ ಸಜ್ಜನರು ಬೇಗನೆ ಅಹಿತರಾಗುವುದಿಲ್ಲ. ಅಹಿತರಾದರೂ ಸ್ನೇಹಮಾಡಿಕೊಳ್ಳಲು ಸಾಧ್ಯರು.

೫೪. ಅ॥ ಸರ್ವಲೋಹಾನಾಂ=ಎಲ್ಲಾ ಲೋಹಗಳಿಗೆ, ದ್ರವತ್ವಾತ್=ದ್ರವವಾಗಿರುವಿಕೆಯಿಂದ, ಮೃಗಪಕ್ಷಿಣಾಂ=ಮೃಗ ಮತ್ತು ಹಕ್ಕಿಗಳಿಗೆ, ನಿಮಿತ್ತಾತ್=ಕಾರಣದಿಂದ, ಮೂರ್ಖಾಣಾಂ=ಮೂರ್ಖರಿಗೆ, ಭಯಾತ್=ಹೆದರಿಕೆಯಿಂದ, ಲೋಭಾತ್=ಆಶೆಯಿಂದ, ಸತಾಂ=ಸಜ್ಜನರಿಗೆ, ದರ್ಶನಾತ್ ಚ = ನೋಡುವುದರಿಂದಲೂ, ಸಂಗತಂ = ಸೇರುವಿಕೆಯು ಆಗುವುದು.

ತಾ॥ ಎಲ್ಲಾ ಲೋಹಗಳು ಕರಗಿದರೆ ಒಟ್ಟುಕೂಡುವುವು. ಮೃಗ ಮತ್ತು ಪಕ್ಷಿಗಳು ಯಾವುದಾದರೊಂದು ಕಾರಣದಿಂದ ಒಟ್ಟು ಸೇರುವುವು. ಮೂರ್ಖರು ಹೆದರಿಕೆಯಿಂದಲೂ, ಯಾವುದಾದರೊಂದು ವಸ್ತುವಿನ ಆಶೆಯಿಂದಲೂ ಸೇರುವರು. ಸಜ್ಜನರು ನೋಡುವುದರಿಂದಲೇ ಒಟ್ಟು ಸೇರುವರು.

೫೫. ಅ॥ ಕಿಂ ಚ=ಮತ್ತು, ಸುಹೃಜ್ಜನಾಃ=ಸ್ನೇಹಿತರು, ನಾರಿಕೇಲ-ಸಮಾಕಾರಾಃ=ತೆಂಗಿನಕಾಯಿಗೆ ಸಮಾನವಾದ ಆಕೃತಿಯುಳ್ಳವರಾಗಿ, ದೃಶ್ಯಂತೇ=ಕಾಣಲ್ಪಡುತ್ತಾರೆ. ಅನ್ಯೇ=ಇತರರು, ಬದರಿಕಾಕಾರಾಃ=

೫೬. स्नेहच्छेदेऽपि साधूनां गुणा नायान्ति विक्रियाम् ।
भङ्गेऽपि हि मृणालानामनुबध्नन्ति तन्तवः ॥ ९५ ॥

೫೭. अन्यच्च ।
शुचित्वं त्यागिता शौर्यं सामान्यं सुखदुःखयोः ।
दाक्षिण्यं चानुरक्तिश्च सत्यता च सुहृद्गुणाः ॥ ९६ ॥

---

ಎಲಚಿಹಣ್ಣಿನಂತೆ ಆಕೃತಿಯುಳ್ಳವರಾಗಿ, ಬಹಿಃ ಏವ=ಹೊರಗೆ ಮಾತ್ರ, ಮನೋಹರಾಃ=ಚೆನ್ನಾಗಿ ಕಾಣುವರು.

ತಾ|| ತೆಂಗಿನಕಾಯಿಯು ಹೊರಗೆ ನಾರಿನಿಂದ ಕೂಡಿ ನೋಡಲು ಚೆನ್ನಾಗಿಲ್ಲದಿದ್ದರೂ ಒಳಗೆ ಮಧುರವಾದ ನೀರು ಕೊಬರಿಯುಳ್ಳುದು. ಹಾಗೆಯೇ ಸ್ನೇಹಿತರು ಮೇಲೆ ನೋಡಲು ಸಾಮಾನ್ಯರಾಗಿದ್ದರೂ ಮನಸ್ಸಿನಲ್ಲಿ ಪ್ರೀತಿಯುಳ್ಳವರಾಗಿರುವರು. ಎಲಚಿಹಣ್ಣು ಹೊರಗೆ ಕೆಂಪಗೆ ಚೆನ್ನಾಗಿದ್ದು ಒಳಗೆ ಬೀಜಮಾತ್ರವುಳ್ಳುದು. ಹಾಗೆಯೇ ಸ್ನೇಹಿತರಲ್ಲದವರು ಹೊರಗೆ ಸ್ನೇಹವಿದ್ದಂತೆ ನಟಿಸುತ್ತ ಒಳಗೆ ದ್ವೇಷವುಳ್ಳವರಾಗಿರುವರು.

೫೬. ಅ|| ಸ್ನೇಹಚ್ಛೇದೇऽಪಿ=ಪ್ರೀತಿಯು ಹೋದಾಗ್ಯೂ, ಸಾಧೂನಾಂ=ಸಜ್ಜನರ, ಗುಣಾಃ=ಗುಣಗಳು, ವಿಕ್ರಿಯಾಂ=ವಿಕಾರವನ್ನು, ನ ಆಯಾಂತಿ=ಹೊಂದುವುದಿಲ್ಲ. ಭಂಗೇ ಅಪಿ=ತುಂಡುಮಾಡಿದರೂ, ಮೃಣಾಲಾನಾಂ=ತಾವರೆ ದಂಟುಗಳ, ತಂತವಃ=ನೂಲುಗಳು, ಅನುಬಧ್ನಂತಿ=ಸಂಬಂಧಿಸಿಕೊಂಡಿರುತ್ತವೆ.

ತಾ|| ತಾವರೆದಂಟುಗಳನ್ನು ತುಂಡುಮಾಡಿದರೂ ಒಳಗಿನ ನೂಲುಗಳು ತುಂಡಾಗದೆ ಅಂಟಿಕೊಂಡಿರುತ್ತವೆ. ಆದರಂತೆ ಸ್ನೇಹವು ಕಡಿದು ಹೋಗಿದ್ದರೂ ಸಜ್ಜನರು ವ್ಯತ್ಯಾಸವಾಗದೆ ಒಂದೇ ರೀತಿಯಾಗಿರುವರು.

೫೭. ಅ|| ಅನ್ಯಚ್ಚ, ಶುಚಿತ್ವಂ=ಶುದ್ಧವಾಗಿರುವಿಕೆ, ತ್ಯಾಗಿತಾ=ದಾನ ಮಾಡುವಿಕೆ, ಶೌರ್ಯಂ=ಪರಾಕ್ರಮ, ಸುಖದುಃಖಯೋಃ=ಸುಖ ಮತ್ತು ದುಃಖಗಳಲ್ಲಿ, ಸಾಮಾನ್ಯಂ=ಸಮಾನವಾಗಿರುವಿಕೆ, ದಾಕ್ಷಿಣ್ಯಂ=ಅನು

೫೮. एतैर्गुणैरुपेतो भवदन्यो मया कः सुहृत्प्राप्तव्यः' इत्यादि तद्वचनमाकर्ण्य हिरण्यको बहिर्निःसृत्याह—'आप्यायितोऽहं भवतानेन वचनामृतेन । तथा चोक्तम्—

೫೯. घर्मार्तं न तथा सुशीतलजलैः स्नानं न मुक्तावली
न श्रीखण्डविलेपनं सुखयति प्रत्यङ्गमप्यर्पितम् ।

---

ಕೂಲತೆ, ಅನುರಕ್ತಿಃ ಚ=ಪ್ರೀತಿ, ಸತ್ಯತಾ ಚ=ಸತ್ಯತೆ ಇವು, ಸುಹೃದ್ಗುಣಾಃ=ಸ್ನೇಹಿತರ ಗುಣಗಳು.

ತಾ॥ ಸ್ನೇಹಿತರಲ್ಲಿ ಶುದ್ಧತೆ, ದಾನಶೀಲತೆ, ಪರಾಕ್ರಮ, ಸುಖದುಃಖಗಳಲ್ಲಿ ಒಂದೇರೀತಿ, ದಾಕ್ಷಿಣ್ಯ, ಪ್ರೀತಿ, ಸತ್ಯವಾಗಿ ನುಡಿಯುವುದು ಇವುಗಳಿರಬೇಕು.

೫೮. ಅ॥ ಏತೈಃ=ಈ, ಗುಣೈಃ=ಗುಣಗಳಿಂದ, ಉಪೇತಃ=ಕೂಡಿದ, ಭವದನ್ಯಃ = ನಿನಗಿಂತ ಬೇರೆಯಾದ, ಸುಹೃತ್=ಸ್ನೇಹಿತನು, ಕಃ= ಯಾವನು, ಮಯಾ=ನನ್ನಿಂದ, ಪ್ರಾಪ್ತವ್ಯಃ = ಹೊಂದತಕ್ಕವನು. ಇತ್ಯಾದಿ=ಇದೇ ಮೊದಲಾದ, ತದ್ವಚನಂ=ಆ ಕಾಗೆಯ ಮಾತನ್ನು, ಆಕರ್ಣ್ಯ=ಕೇಳಿ, ಹಿರಣ್ಯಕಃ=ಹಿರಣ್ಯಕನು, ಬಹಿಃ=ಹೊರಗೆ, ನಿಸ್ಸೃತ್ಯ= ಹೊರಟು, ಆಹ=ಹೇಳುತ್ತದೆ. ಅಹಂ=ನಾನು, ಭವತಾ=ನಿನ್ನಿಂದ, ಅನೇನ=ಈ,ವಚನಾಮೃತೇನ=ಮಾತೆಂಬ ಅಮೃತದಿಂದ, ಆಪ್ಯಾಯಿತಃ= ಸಂತೋಷಗೊಳಿಸಲ್ಪಟ್ಟಿದ್ದೇನೆ, ತಥಾ ಚ ಉಕ್ತಮ್.

೫೯. ಅ॥ ಯಥಾ=ಹೇಗೆ, ಸದ್ಯುಕ್ತ್ಯಾ=ಒಳ್ಳೆಯ‌ಯುಕ್ತಿಯಿಂದ, ಪುರಸ್ಕೃತಂ = ಕೂಡಿದ, ಸುಕೃತಿನಾಂ = ಪುಣ್ಯವಂತರ, ಆಕೃಷ್ಟಿಮಂತ್ರೋಪಮಂ=ಆಕರ್ಷಣಮಾಡುವ ಮಂತ್ರಕ್ಕೆ ಸಮಾನವಾದ, ಪ್ರೀತ್ಯಾ=ಸ್ನೇಹದಿಂದ ಕೂಡಿದ, ಸಜ್ಜನಭಾಷಿತಂ=ಸಜ್ಜನರ ಮಾತು, ಚೇತಸಃ=ಮನಸ್ಸಿಗೆ, ಪ್ರಾಯಃ=ಬಹಳವುಟ್ಟಿಗೆ, ಪ್ರಭವತಿ=ಸಮರ್ಥವಾಗುವುದೊ ; ತಥಾ= ಹಾಗೆ, ಘರ್ಮಾರ್ತಂ=ಬೇಗೆಯಿಂದ ಪೀಡಿತನಾದವನನ್ನು, ಸುಶೀತಲಜಲೈಃ

प्रीत्या सज्जनभाषितं प्रभवति प्रायो यथा चेतसः
सद्युक्त्या च पुरस्कृतं सुकृतिनामाकृष्टिमन्त्रोपमम् ॥

६०. अन्यच्च ।

रहस्यभेदो याच्ञा च नैष्ठुर्यं चलचित्तता ।
क्रोधो निस्सत्यता द्यूतमेतन्मित्रस्य दूषणम् ॥ ९८ ॥

= ತಣ್ಣಗಿರುವ ನೀರಿನಿಂದ, ಸ್ನಾನಂ= ಸ್ನಾನವು, ನ ಸುಖಯತಿ = ಸುಖವನ್ನುಂಟುಮಾಡುವುದಿಲ್ಲ. ಮುಕ್ತಾವಲೀ = ಮುತ್ತಿನ ಸಮೂಹವು, ನ ಸುಖಯತಿ, ಪ್ರತ್ಯಂಗಂ = ಪ್ರತಿಯೊಂದು ಅವಯವಗಳಲ್ಲಿಯೂ, ಅರ್ಪಿತಂ = ಇಡಲ್ಪಟ್ಟ, ಶ್ರೀಖಂಡಲೇಪನಂ = ಗಂಧದ ಲೇಪನವು, ನ ಸುಖಯತಿ = ಸಂತೋಷಗೊಳಿಸುವುದಿಲ್ಲ.

ತಾ॥ ಪುಣ್ಯವಂತರನ್ನು ವಶಪಡಿಸಿಕೊಳ್ಳುವ ಮಂತ್ರದಂತಿರುವ ಯುಕ್ತಿಯುಕ್ತವಾದ ಸಜ್ಜನರ ಮಾತು ಹೇಗೆ ಮನಸ್ಸಿನಮೇಲೆ ಪರಿಣಾಮಗೊಂಡು ಸುಖವನ್ನುಂಟುಮಾಡುವುದೊ, ಹಾಗೆ ಬಿಸಿಲಿನ ಬೇಗೆಯಿಂದ ಬಳಲಿದ ಮಾನವನಿಗೆ ತಣ್ಣೀರಿನ ಸ್ನಾನ, ಮುತ್ತಿನ ಸಮೂಹ, ಪ್ರತಿಯೊಂದು ಅವಯವಗಳಲ್ಲಿ ಬಳಿದ ಗಂಧ ಇವುಗಳು ಸುಖವನ್ನುಂಟುಮಾಡುವುದಿಲ್ಲ. ಎಂದರೆ ತಣ್ಣಗಿರುವ ತಣ್ಣೀರು ಮೊದಲಾದವುಗಳಿಗಿಂತ ಸಜ್ಜನರ ಮಾತು ಹಿತಕರವಾದುದು.

೬೦. ಅ॥ ಅನ್ಯಚ್ಚ, ರಹಸ್ಯಭೇದಃ = ಗುಟ್ಟನ್ನು ಒಡೆಯುವುದು, ಯಾಚ್ಞಾ = ಬೇಡುವುದು, ನೈಷ್ಠುರ್ಯಂ = ಕಠಿನವಾಗಿರುವಿಕೆ, ಚಲಚಿತ್ತತಾ = ಚಂಚಲಮನಸ್ಸುಳ್ಳತನ, ಕ್ರೋಧಃ = ಕೋಪ, ನಿಸ್ಸತ್ಯತಾ = ಸತ್ಯವಿಲ್ಲದಿರುವುದು, ದ್ಯೂತಂ = ಜೂಜು, ಏತತ್ = ಇದು, ಮಿತ್ರಸ್ಯ = ಸ್ನೇಹಿತನ, ದೂಷಣಂ = ದೋಷವು.

ತಾ॥ ಸ್ನೇಹಿತನಲ್ಲಿ ಗುಟ್ಟನ್ನು ಬಹಿರಂಗಪಡಿಸುವಿಕೆ, ಬೇಡುವ ಸ್ವಭಾವ, ಕಠಿನತೆ, ಚಂಚಲ ಮನಸ್ಸು, ಕೋಪ, ಸುಳ್ಳು, ಜೂಜು ಇವು ಇರಕೂಡದು.

೬೧. अनेन वचनक्रमेण तदेकदूषणमपि त्वयि न लक्ष्यते । यतः ।

೬೨. पटुत्वं सत्यवादित्वं कथायोगेन बुध्यते ।
अस्तब्धत्वमचापल्यं प्रत्यक्षेणावगम्यते ॥ ९९ ॥

೬೩. अपरं च ।

अन्यथैव हि सौहार्दं भवेत्स्वच्छान्तरात्मनः ।
प्रवर्ततेऽन्यथा वाणी शाठ्योपहतचेतसः ॥ १०० ॥

---

೬೧. ಅ॥ ಅನೇನ = ಈ, ವಚನಕ್ರಮೇಣ = ಮಾತುಗಳ ರೀತಿಯಿಂದ, ತ್ವಯಿ = ನಿನ್ನಲ್ಲಿ, ತತ್ = ಆ, ಏಕದೂಷಣಂ ಅಪಿ = ಒಂದು ದೋಷವೂ; ನ ಲಕ್ಷ್ಯತೇ = ಕಾಣಲ್ಪಡುವುದಿಲ್ಲ. ಯತಃ = ಯಾವ ಕಾರಣದಿಂದ.

೬೨. ಅ॥ ಕಥಾಯೋಗೇನ = ಸಂಭಾಷಣೆಯಿಂದ, ಪಟುತ್ವಂ = ಕುಶಲತೆ, ಸತ್ಯವಾದಿತ್ವಂ = ಸತ್ಯವಾಗಿ ನುಡಿಯುವಿಕೆ ಇವು, ಬುಧ್ಯತೇ = ತಿಳಿಯಲ್ಪಡುತ್ತವೆ. ಪ್ರತ್ಯಕ್ಷೇಣ = ಕಣ್ಣಿನಿಂದ ನೋಡುವುದರಿಂದ, ಅಸ್ತಬ್ಧತ್ವಂ = ದಡ್ಡನಲ್ಲದಿರುವುದು, ಅಚಾಪಲ್ಯಂ = ಸ್ಥೈರ್ಯ ಇವು, ಅವಗಮ್ಯತೇ = ತಿಳಿಯಲ್ಪಡುತ್ತದೆ.

ತಾ॥ ಮಾತಾಡುವುದರಿಂದ ಮನುಷ್ಯನ ಜಾಣತನ, ಸತ್ಯವನ್ನು ನುಡಿಯುವಿಕೆಯೂ, ನೋಡುವುದರಿಂದ ಚಟುವಟಿಕೆ, ಸ್ಥಿರವಾದ ಮನಸ್ಸುಳ್ಳತನವೂ ತಿಳಿಯುವುದು.

೬೩. ಅ॥ ಸ್ವಚ್ಛಾಂತರಾತ್ಮನಃ = ಶುದ್ಧಮನಸ್ಸುಳ್ಳವನ, ಸೌಹಾರ್ದಂ = ಸ್ನೇಹವು, ಅನ್ಯಥೈವ ಭವೇತ್ ಹಿ = ಬೇರೆ ವಿಧವಾಗಿಯೇ ಆದೀತು. ಶಾಠ್ಯೋಪಹತಚೇತಸಃ = ದುಷ್ಟಮನಸ್ಸುಳ್ಳವನ, ವಾಣೀ = ಮಾತು, ಅನ್ಯಥಾ = ಬೇರೆ ವಿಧವಾಗಿ, ಪ್ರವರ್ತತೇ = ಉಂಟಾಗುತ್ತದೆ.

ತಾ॥ ಶುದ್ಧ ಮನಸ್ಸುಳ್ಳ ಸಜ್ಜನನ ಸ್ನೇಹವೇ ಬೇರೆ ವಿಧವಾದುದು. ಮೂರ್ಖನ ನುಡಿಯೇ ಬೇರೆಯಾಗಿರುವುದು.

॥। ८४. मनस्यन्यद्वचस्यन्यत्कार्यमन्यद्दुरात्मनाम् ।
मनस्येकं वचस्येकं कर्मण्येकं महात्मनाम् ॥ १०१ ॥

८५. तद्भवतु भवतोऽभिमतमेव ।' इत्युक्त्वा हिरण्यको मैत्र्यं विधाय भोजनविशेषैर्वायसं सन्तोष्य विवरं प्रविष्टः । वायसोऽपि स्वस्थानं गतः । ततः प्रभृति तयोरन्योन्याहारप्रदानेन कुशलप्रश्नैर्विश्रम्भालापैश्च कालोऽतिवर्तते । एकदा लघुपतनको हिरण्यकमाह—'सखे कष्टतरलभ्याहारमिदं स्थानं परित्यज्य स्थानान्तरं गन्तुमिच्छामि ।' हिरण्यको ब्रूते—'मित्र क्व गन्तव्यम् । तथा चोक्तम्—

---

೭೪ ಅ॥ ದುರಾತ್ಮನಾಂ = ದುಷ್ಟರ, ಮನಸಿ = ಮನಸ್ಸಿನಲ್ಲಿ, ಅನ್ಯತ್ = ಬೇರೆ, ವಚಸಿ = ಮಾತಿನಲ್ಲಿ, ಅನ್ಯತ್ = ಬೇರೆ, ಕಾರ್ಯಂ = ಕೆಲಸವು, ಅನ್ಯತ್ = ಬೇರೆಯಾಗಿರುವುದು. ಮಹಾತ್ಮನಾಂ = ದೊಡ್ಡವರ, ಮನಸಿ = ಮನಸ್ಸಿನಲ್ಲಿ, ಏಕಂ = ಒಂದು, ವಚಸಿ = ಮಾತಿನಲ್ಲಿ, ಏಕಂ = ಒಂದು, ಕರ್ಮಣಿ = ಕಾರ್ಯದಲ್ಲಿ, ಏಕಂ = ಒಂದು.

ತಾ॥ ದುಷ್ಟರು ಆಲೋಚಿಸುವುದೇ ಬೇರೆ. ಮಾಡುವುದೇ ಬೇರೆ. ಮಹಾತ್ಮರು ಆಲೋಚಿಸಿದಂತೆಯೇ, ಹೇಳಿದಂತೆಯೇ ಕೆಲಸವನ್ನು ಮಾಡುವರು

೭೫. ಅ॥ ತತ್ = ಆದ್ದರಿಂದ, ಭವತಃ = ನಿನ್ನ, ಅಭಿಮತಂ ಏವ = ಇಷ್ಟವೇ, ಭವತು = ಆಗಲಿ: ಇತಿ ಉಕ್ತ್ವಾ = ಹೀಗೆ ಹೇಳಿ, ಹಿರಣ್ಯಕಃ = ಹಿರಣ್ಯಕವು, ಮೈತ್ರ್ಯಂ = ಸ್ನೇಹವನ್ನು, ವಿಧಾಯ = ಮಾಡಿ, ಭೋಜನವಿಶೇಷೈಃ = ಉತ್ತಮ ಊಟಗಳಿಂದ, ವಾಯಸಂ = ಕಾಗೆಯನ್ನು, ಸಂತೋಷ್ಯ = ಸಂತೋಷಗೊಳಿಸಿ, ವಿವರಂ = ಬಿಲವನ್ನು, ಪ್ರವಿಷ್ಟಃ = ಹೊಕ್ಕಿತು. ವಾಯಸಃ ಅಪಿ = ಕಾಗೆಯೂ, ಸ್ವಸ್ಥಾನಂ ಗತಃ = ತನ್ನ ಸ್ಥಳಕ್ಕೆ ಹೋಯಿತು. ತತಃ ಪ್ರಭೃತಿ = ಅದು ಮೊದಲ್ಗೊಂಡು, ತಯೋಃ = ಅವರಿಬ್ಬರಲ್ಲಿ, ಅನ್ಯೋನ್ಯ = ಪರಸ್ಪರ, ಆಹಾರಪ್ರದಾನೇನ = ಆಹಾರವನ್ನು

೬೬. **चलत्येकेन पादेन तिष्ठत्येकेन बुद्धिमान् ।
मा समीक्ष्य परं स्थानं पूर्वमायतनं त्यजेत्' ॥ १०२ ॥**

೬೭. वायसो ब्रूते–'अस्ति सुनिरूपितस्थानम् ।' हिरण्यकोऽवदत् । 'किं तत् ।' वायसो ब्रूते–'अस्ति दण्डकारण्ये कर्पूरगौराभिधानं सरः ।

---

ಕೊಡುವುದರಿಂದಲೂ, ಕುಶಲಪ್ರಶ್ನೈಃ = ಕ್ಷೇಮದ ಪ್ರಶ್ನೆಗಳಿಂದಲೂ, ವಿಶ್ರಂಭಾಲಾಪೈಃ ಚ = ವಿಶ್ವಾಸದ ಮಾತುಗಳಿಂದಲೂ, ಕಾಲಃ = ಸಮಯವು, ಅತಿವರ್ತತೇ = ಕಳೆಯುತ್ತದೆ. ಏಕದಾ = ಒಂದಾನೊಂದು ದಿನ, ಲಘುಪತನಕಃ = ಲಘುಪತನಕವು, ಹಿರಣ್ಯಕಂ = ಹಿರಣ್ಯಕನನ್ನು ಕುರಿತು, ಆಹ = ಹೇಳುತ್ತದೆ. ಸಖೇ = ಸ್ನೇಹಿತನೆ, ಕಷ್ಟತರ = ಅತ್ಯಂತ ಕಷ್ಟದಿಂದ, ಲಭ್ಯ = ಹೊಂದಲು ಯೋಗ್ಯವಾದ, ಆಹಾರಂ = ಆಹಾರವುಳ್ಳ, ಇದಂ = ಈ, ಸ್ಥಾನಂ = ಸ್ಥಳವನ್ನು, ಪರಿತ್ಯಜ್ಯ = ಬಿಟ್ಟು, ಸ್ಥಾನಾಂತರಂ = ಬೇರೆ ಸ್ಥಳಕ್ಕೆ, ಗಂತುಂ = ಹೋಗುವುದಕ್ಕೆ, ಇಚ್ಛಾಮಿ = ಅಪೇಕ್ಷಿಸುತ್ತೇನೆ ಹಿರಣ್ಯಕಃ = ಹಿರಣ್ಯಕವು, ಬ್ರೂತೇ = ಹೇಳುತ್ತದೆ. ಮಿತ್ರ = ಸ್ನೇಹಿತನೆ, ಕ್ವ = ಎಲ್ಲಿಗೆ, ಗಂತವ್ಯಂ = ಹೋಗತಕ್ಕದ್ದು. ತಥಾ ಚ ಉಕ್ತಂ—

೬೬. ಅ॥ ಬುದ್ಧಿಮಾನ್ = ಬುದ್ಧಿವಂತನು, ಏಕೇನ ಪಾದೇನ = ಒಂದು ಪಾದದಿಂದ, ತಿಷ್ಠತಿ = ನಿಲ್ಲುತ್ತಾನೆ. ಪರಂ = ಬೇರೆ, ಸ್ಥಾನಂ = ಸ್ಥಳವನ್ನು, ಅಸಮೀಕ್ಷ್ಯ = ಚೆನ್ನಾಗಿ ಪರೀಕ್ಷಿಸದೆ, ಪೂರ್ವಂ = ಹಿಂದಿನ, ಆಯತನಂ = ಸ್ಥಳವನ್ನು (ಮನೆಯನ್ನು), ಮಾ ತ್ಯಜೇತ್ = ಬಿಡಕೂಡದು.

ತಾ॥ ಬುದ್ಧಿಶಾಲಿಯಾದವನು ಸ್ಥಳವನ್ನು ಬದಲಾಯಿಸುವಾಗ ತಾನಿರುವ ಮೊದಲಿನ ಸ್ಥಳವನ್ನು ಪೂರ್ತಿಯಾಗಿ ಬಿಡದೆ ಮತ್ತೊಂದು ಸ್ಥಳಕ್ಕೆ ಹೋಗುವನು. ಇನ್ನೊಂದು ಸ್ಥಳವನ್ನು ಪೂರ್ಣವಾಗಿ ಪರೀಕ್ಷಿಸದೆ ಮೊದಲಿನ ಸ್ಥಳವನ್ನು ಬಿಡಬಾರದು.

೬೭. ಅ॥ ವಾಯಸೋ ಬ್ರೂತೇ–ಸುನಿರೂಪಿತಂ = ಚೆನ್ನಾಗಿ ಪರೀಕ್ಷಿಸಲ್ಪಟ್ಟ, ಸ್ಥಾನಂ = ಸ್ಥಳವು, ಅಸ್ತಿ = ಇದೆ ಹಿರಣ್ಯಕಃ = ಹಿರಣ್ಯಕವು,

तत्र चिरकालोपार्जितः प्रियसुहृन्मे मन्थराभिधानो कच्छपो धार्मिकः प्रतिवसति । यतः ।

೬೮. **परोपदेशे पाण्डित्यं सर्वेषां सुकरं नृणाम् ।**
**धर्मे स्वीयमनुष्ठानं कस्यचित्तु महात्मनः ॥ १०३ ॥**

೬೯. स च भोजनविशेषैः मां संवर्धयिष्यति ।' हिरण्यकोऽप्याह–'तत्किमत्रावस्थाय मया कर्तव्यम् । यतः ।

---

ಅವದತ್ = ಹೇಳಿತು. ತತ್ = ಅದು, ಕಿಂ = ಯಾವುದು ? ವಾಯಸೋ ಬ್ರೂತೇ–ದಂಡಕಾರಣ್ಯೇ = ದಂಡಕಾರಣ್ಯದಲ್ಲಿ, ಕರ್ಪೂರಗೌರಾಭಿಧಾನಂ = ಕರ್ಪೂರಗೌರವೆಂದು ಹೆಸರುಳ್ಳ, ಸರಃ = ಕೆರೆಯು, ಅಸ್ತಿ = ಇದೆ. ತತ್ರ = ಅಲ್ಲಿ, ಚಿರಕಾಲ = ಬಹಳ ಕಾಲದಿಂದ, ಉಪಾರ್ಜಿತಃ = ಸಂಪಾದಿಸಲ್ಪಟ್ಟ, ಮೇ = ನನ್ನ, ಪ್ರಿಯಸುಹೃತ್ = ಪ್ರಿಯಮಿತ್ರನಾದ, ಮಂಥರಾಭಿಧಾನಃ = ಮಂಥರನೆಂದು ಹೆಸರುಳ್ಳ, ಧಾರ್ಮಿಕಃ = ಧರ್ಮಿಷ್ಠನಾದ, ಕಚ್ಛಪಃ = ಆಮೆಯು, ಪ್ರತಿವಸತಿ = ವಾಸಮಾಡುತ್ತದೆ. ಯತಃ = ಯಾವ ಕಾರಣದಿಂದ.

೬೮. ಅ॥ ಸರ್ವೇಷಾಂ = ಎಲ್ಲ, ನೃಣಾಂ = ಮನುಷ್ಯರಿಗೆ, ಪರೋಪದೇಶೇ = ಮತ್ತೊಬ್ಬರಿಗೆ ಬುದ್ಧಿವಾದ ಹೇಳುವುದರಲ್ಲಿ, ಪಾಂಡಿತ್ಯಂ = ಬುದ್ಧಿವಂತಿಕೆಯು, ಸುಕರಂ = ಸುಲಭಸಾಧ್ಯವಾದುದು. ಧರ್ಮೇ = ಧರ್ಮದಲ್ಲಿ, ಸ್ವೀಯಂ = ಸ್ವಂತವಾದ, ಅನುಷ್ಠಾನಂ = ಆಚರಣೆಯು, ಕಸ್ಯಚಿತ್ = ಒಬ್ಬ, ಮಹಾತ್ಮನಃ = ಮಹಾತ್ಮನಿಗಿರುವುದು.

ತಾ॥ ಎಲ್ಲರೂ ಇನ್ನೊಬ್ಬರಿಗೆ ಬುದ್ಧಿ ಹೇಳುವುದರಲ್ಲಿ ಬುದ್ಧಿವಂತರು. ಆದರೆ ಹಾಗೆ ಆಚರಿಸುವವರು ಕೆಲವು ಮಹಾತ್ಮರು ಮಾತ್ರ.

೬೯. ಅ॥ ಸಃ ಚ = ಅದು, ಭೋಜನವಿಶೇಷೈಃ = ಉತ್ತಮ ಊಟದಿಂದ, ಮಾಂ = ನನ್ನನ್ನು, ಸಂವರ್ಧಯಿಷ್ಯತಿ = ಬೆಳೆಯಿಸುವುದು. ಹಿರಣ್ಯಕಃ ಅಪಿ

೭೦. यस्मिन्देशे न संमानो न वृत्तिर्न च बान्धवः ।
न च विद्यागमः कश्चित्तं देशं परिवर्जयेत् ॥ १०४ ॥

೭೧. अपरं च ।

लोकयात्रा भयं लज्जा दाक्षिण्यं त्यागशीलता ।
पञ्च यत्र न विद्यन्ते न कुर्यात्तत्र संस्थितिम् ॥ १०५ ॥

---

ಆಹ=ಹಿರಣ್ಯಕವೂ ಹೇಳುತ್ತದೆ ತತ್=ಆದ್ದರಿಂದ, ಅತ್ರ=ಇಲ್ಲಿ, ಅವಸ್ಥಾಯ=ಇದ್ದು, ಮಯಾ=ನನ್ನಿಂದ, ಕಿಂ=ಏನು, ಕರ್ತವ್ಯಂ=ಮಾಡತಕ್ಕುದು. ಯತಃ,

೭೦. ಅ॥ ಯಸ್ಮಿನ್ ದೇಶೇ=ಯಾವ ಸ್ಥಳದಲ್ಲಿ, ಸಂಮಾನಃ=ಸನ್ಮಾನವು, ನ=ಇಲ್ಲವೊ. ವೃತ್ತಿಃ=ಜೀವನವು, ನ=ಇಲ್ಲವೊ. ಬಾಂಧವಃ=ಬಂಧುವು, ನ ಚ=ಇಲ್ಲವೊ ಕಶ್ಚಿತ್=ಯಾವ ಒಂದು, ವಿದ್ಯಾಗಮಃ=ವಿದ್ಯಾಪ್ರಾಪ್ತಿಯು, ನ ಚ=ಇಲ್ಲವೊ; ತಂ ದೇಶಂ=ಆ ಸ್ಥಳವನ್ನು, ಪರಿವರ್ಜಯೇತ್=ಬಿಡಬೇಕು.

ತಾ॥ ಎಲ್ಲಿ ಸನ್ಮಾನ, ಜೀವನದ ದಾರಿ, ಬಂಧು, ವಿದ್ಯೆಯ ಪ್ರಾಪ್ತಿ ಇವು ಇಲ್ಲವೊ ಆ ಸ್ಥಳವನ್ನು ತ್ಯಜಿಸಬೇಕು.

೭೧. ಅ॥ ಅಪರಂ ಚ, ಲೋಕಯಾತ್ರಾ=ಜೀವನ, ಭಯಂ=ಹೆದರಿಕೆ, ಲಜ್ಜಾ=ನಾಚಿಕೆ, ದಾಕ್ಷಿಣ್ಯಂ=ದಾಕ್ಷಿಣ್ಯ, ತ್ಯಾಗಶೀಲತಾ=ದಾನಮಾಡುವ ಸ್ವಭಾವ, ಪಂಚ=ಈ ಐದು, ಯತ್ರ=ಎಲ್ಲಿ, ನ ವಿದ್ಯಂತೇ=ಇಲ್ಲವೊ. ತತ್ರ=ಅಲ್ಲಿ, ಸಂಸ್ಥಿತಿಂ=ವಾಸವನ್ನು, ನ ಕುರ್ಯಾತ್=ಮಾಡಕೂಡದು.

ತಾ॥ ಯಾವ ಸ್ಥಳದಲ್ಲಿ ಜೀವನದ ದಾರಿ, ಹೆದರಿಕೆ, ನಾಚಿಕೆ, ದಾಕ್ಷಿಣ್ಯ, ದಾನದ ಸ್ವಭಾವ ಈ ಐದು ಇಲ್ಲವೊ ಅಲ್ಲಿ ವಾಸ ಮಾಡಬಾರದು.

८१. तत्र मित्र न वस्तव्यं यत्र नास्ति चतुष्टयम् ।
ऋणदाता च वैद्यश्च श्रोत्रियः सजला नदी ॥ १०६ ॥

८२. ततो मामपि तत्र नय ।' अथ वायसस्तत्र तेन मित्रेण सह विचित्रालापैः सुखेन तस्य सरसः समीपं ययौ । ततो मन्थरो दूरादवलोक्य लघुपतनकस्य यथोचितमातिथ्यं विधाय मूषिकस्यातिथिसत्कारं चकार । यतः ।

---

೮೧. ಅ॥ ಯತ್ರ=ಯಾವ ಸ್ಥಳದಲ್ಲಿ, ಋಣದಾತಾ ಚ=ಸಾಲ ಕೊಡುವವನೂ, ವೈದ್ಯಃ ಚ=ವೈದ್ಯನೂ, ಶ್ರೋತ್ರಿಯಃ=ವೇದಾಧ್ಯಯನ ಮಾಡಿದ ಬ್ರಾಹ್ಮಣನೂ, ಸಜಲಾ=ನೀರಿನಿಂದ ಸಹಿತವಾದ, ನದೀ=ಹೊಳೆಯೂ, ಚತುಷ್ಟಯಂ=ಈ ನಾಲ್ಕು, ನಾಸ್ತಿ=ಇಲ್ಲವೊ; ಮಿತ್ರ=ಸ್ನೇಹಿತನೆ, ತತ್ರ=ಅಲ್ಲಿ, ನ ವಸ್ತವ್ಯಂ=ವಾಸಿಸಬಾರದು.

ತಾ॥ ಸ್ನೇಹಿತನೆ, ಸಾಲ ಕೊಡುವ ಹಣಗಾರ, ವೈದ್ಯ, ವೇದಾಧ್ಯಯನ ಮಾಡಿದ ಬ್ರಾಹ್ಮಣ, ನೀರಿರುವ ಹೊಳೆ ಈ ನಾಲ್ಕು ಇಲ್ಲದ ಸ್ಥಳದಲ್ಲಿ ವಾಸ ಮಾಡಬಾರದು.

೮೨. ಅ॥ ತತಃ=ಅದರಿಂದ, ಮಾಂ ಅಪಿ=ನನ್ನನ್ನೂ, ತತ್ರ=ಅಲ್ಲಿಗೆ, ನಯ=ಕರೆದುಕೊಂಡು ಹೋಗು. ಅಥ=ಬಳಿಕ, ವಾಯಸಃ=ಕಾಗೆಯು, ತತ್ರ=ಅಲ್ಲಿ, ತೇನ=ಆ, ಮಿತ್ರೇಣ ಸಹ=ಸ್ನೇಹಿತನಾದ ಇಲಿಯೊಡನೆ, ವಿಚಿತ್ರಾಲಾಪೈಃ=ಬಗೆಬಗೆಯ ಮಾತುಗಳಿಂದ, ಸುಖೇನ=ಸುಖದಿಂದ, ತಸ್ಯ=ಆ, ಸರಸಃ=ಕೆರೆಯ, ಸಮೀಪಂ=ಹತ್ತಿರಕ್ಕೆ, ಯಯೌ=ಹೋಯಿತು. ತತಃ=ತರುವಾಯ, ಮಂಥರಃ=ಮಂಥರವೆಂಬ ಆಮೆಯು, ದೂರಾತ್=ದೂರದಿಂದ, ಅವಲೋಕ್ಯ=ನೋಡಿ, ಲಘುಪತನಕಸ್ಯ=ಲಘುಪತನಕವೆಂಬ ಕಾಗೆಗೆ, ಯಥೋಚಿತಂ=ಔಚಿತ್ಯವನ್ನನುಸರಿಸಿ, ಆತಿಥ್ಯಂ=ಅತಿಥಿಸತ್ಕಾರವನ್ನು, ವಿಧಾಯ=ಮಾಡಿ, ಮೂಷಿಕಸ್ಯ ಚ=ಇಲಿಗೂ,

೭೪. बालो वा यदि वा वृद्धो युवा वा गृहमागतः ।
तस्य पूजा विधातव्या सर्वस्याभ्यागतो गुरुः ॥ १०७ ॥

೭೫. गुरुरग्निर्द्विजातीनां वर्णानां ब्राह्मणो गुरुः ।
पतिरेको गुरुः स्त्रीणां सर्वस्याभ्यागतो गुरुः ॥ १०८ ॥

೭೬. वायसोऽवदत्—'सखे मन्थर, सविशेषपूजामस्मै विधेहि ।

---

ಅತಿಥಿಸತ್ಕಾರಂ = ಅತಿಥಿಗೆ ಮಾಡುವ ಸನ್ಮಾನವನ್ನು, ಚಕಾರ = ಮಾಡಿತು. ಯತಃ,

೭೪. ಅ॥ ಗೃಹಂ = ಮನೆಗೆ, ಆಗತಃ = ಬಂದವನು, ಬಾಲಃ ವಾ = ಬಾಲಕನೇ ಆಗಲಿ, ವೃದ್ಧಃ ಯದಿ ವಾ = ಮುದುಕನೇ ಆಗಲಿ, ತಸ್ಯ = ಅವನ, ಪೂಜಾ = ಪೂಜೆಯು, ವಿಧಾತವ್ಯಾ = ಮಾಡತಕ್ಕುದು. ಸರ್ವಸ್ಯ = ಎಲ್ಲರಿಗೂ, ಅಭ್ಯಾಗತಃ = ಮನೆಗೆ ಬಂದವನು, ಗುರುಃ = ಪೂಜ್ಯನು.

ತಾ॥ ಎಲ್ಲರಿಗೂ ತಮ್ಮ ಮನೆಗೆ ಬಂದವನು ಪೂಜ್ಯನಾದುದರಿಂದ ಗೃಹಸ್ಥನು ಬಾಲಕ, ಯುವಕ, ಮುದುಕ ಇವರಲ್ಲಿ ಯಾರು ಮನೆಗೆ ಬಂದರೂ ಅವರನ್ನು ಪೂಜಿಸಬೇಕು.

೭೫. ಅ॥ ದ್ವಿಜಾತೀನಾಂ = ಬ್ರಾಹ್ಮಣರಿಗೆ, ಅಗ್ನಿಃ = ಬೆಂಕಿಯು, ಗುರುಃ = ಗುರುವಿನಂತೆ ಪೂಜ್ಯವು. ವರ್ಣಾನಾಂ = ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣದವರಿಗೆ, ಬ್ರಾಹ್ಮಣಃ = ಬ್ರಾಹ್ಮಣನು, ಗುರುಃ = ಗುರುವು. ಸರ್ವಸ್ಯ = ಎಲ್ಲರಿಗೂ, ಅಭ್ಯಾಗತಃ = ಮನೆಗೆ ಬಂದವನು, ಗುರುಃ ಗುರುವು.

ತಾ॥ ಬ್ರಾಹ್ಮಣರಿಗೆ ಅಗ್ನಿಯೂ, ಬ್ರಾಹ್ಮಣ ಮೊದಲಾದ ಜಾತಿಯವರಿಗೆ ಬ್ರಾಹ್ಮಣನೂ, ಹೆಂಗಸರಿಗೆ ಗಂಡನೂ, ಎಲ್ಲರಿಗೂ ಮನೆಗೆ ಬಂದವನೂ ಗುರುವು.

೭೬. ಅ॥ ವಾಯಸಃ = ಕಾಗೆಯು, ಅವದತ್ = ಹೇಳಿತು. ಸಖೇ ಮಂಥರ

यतोऽयं पुण्यकर्मणां धुरीणः कारुण्यरत्नाकरो हिरण्यकनामा मूषिकराजः । एतस्य गुणस्तुतिं जिह्वासहस्रद्वयेनापि सर्पराजो न कदाचित्कथयितुं समर्थः स्यात् ।' इत्युक्त्वा चित्रग्रीवोपाख्यानं वर्णितवान् । मन्थरः सादरं हिरण्यकं सम्पूज्याह–'भद्र, आत्मनो निर्जनवनागमनकारणमाख्यातुमर्हसि' हिरण्यकोऽवदत्–'कथयामि । श्रूयताम् ।

---

=ಸ್ನೇಹಿತನಾದ ಮಂಥರನೆ, ಅಸ್ಮೈ=ಈ ಇಲಿಗೆ, ಸವಿಶೇಷಪೂಜಾಂ= ಅತಿಶಯವಾದ ಪೂಜೆಯನ್ನು, ವಿಧೇಹಿ=ಮಾಡು. ಯತಃ=ಯಾವ ಕಾರಣದಿಂದ, ಅಯಂ=ಇವನು, ಪುಣ್ಯಕರ್ಮಣಾಂ=ಪುಣ್ಯಕಾರ್ಯಗಳನ್ನು ಮಾಡಿದವರಲ್ಲಿ, ಧುರೀಣಃ=ಮುಂದಾಳಾದ, ಕಾರುಣ್ಯರತ್ನಾಕರಃ=ದಯೆಗೆ ಸಮುದ್ರದಂತಿರುವ, ಹಿರಣ್ಯಕನಾಮಾ = ಹಿರಣ್ಯಕನೆಂದು ಹೆಸರುಳ್ಳ, ಮೂಷಿಕರಾಜಃ=ಇಲಿಗಳ ಒಡೆಯನು. ಏತಸ್ಯ=ಇವನ, ಗುಣಸ್ತುತಿಂ= ಗುಣಗಳ ಸ್ತೋತ್ರವನ್ನು, ಸರ್ಪರಾಜಃ=ಮಹಾಶೇಷನು, ಜಿಹ್ವಾಸಹಸ್ರ-ದ್ವಯೇನ ಅಪಿ=ಎರಡು ಸಾವಿರ ನಾಲಿಗೆಗಳಿಂದಲೂ, ಕದಾಚಿತ್=ಒಂದು ಸಲ, ಕಥಯಿತುಂ=ಹೇಳುವುದಕ್ಕೆ, ಸಮರ್ಥಃ=ಶಕ್ತನು, ನ ಸ್ಯಾತ್=ಆಗಲಾರನು. ಇತ್ಯುಕ್ತ್ವಾ=ಹೀಗೆ, ಹೇಳಿ ಚಿತ್ರಗ್ರೀವೋಪಾಖ್ಯಾನಂ= ಚಿತ್ರಗ್ರೀವನ ಕಥೆಯನ್ನು, ವರ್ಣಿತವಾನ್ = ಹೇಳಿತು. ಮಂಥರಃ= ಮಂಥರನು, ಹಿರಣ್ಯಕಂ=ಹಿರಣ್ಯಕನನ್ನು, ಸಾದರಂ=ವಿಶ್ವಾಸದಿಂದ ಸಹಿತವಾಗಿ, ಸಂಪೂಜ್ಯ=ಪೂಜಿಸಿ, ಆಹ=ಹೇಳುತ್ತಾನೆ. ಭದ್ರ=ಮಂಗಳಕರನೆ, ಆತ್ಮನಃ=ನಿನ್ನ, ನಿರ್ಜನ=ಜನರಿಲ್ಲದ, ವನಾಗಮನ=ವನಕ್ಕೆ ಬರುವುದಕ್ಕೆ, ಕಾರಣಂ=ಕಾರಣವನ್ನು, ಆಖ್ಯಾತುಂ=ಹೇಳುವುದಕ್ಕೆ, ಅರ್ಹಸಿ= ಯೋಗ್ಯನಾಗಿದ್ದೀಯೆ. ಹಿರಣ್ಯಕಃ=ಹಿರಣ್ಯಕನು, ಅವದತ್=ಹೇಳಿದನು. ಕಥಯಾಮಿ=ಹೇಳುತ್ತೇನೆ. ಶ್ರೂಯತಾಂ=ಕೇಳಲ್ಪಡಲಿ

## कथा ४

१. अस्ति चम्पकाभिधानायां नगर्यां परिव्राजकावसथः। तत्र चूडाकर्णो नाम परिव्राट् प्रतिवसति। स च भोजनावशिष्टभिक्षान्नसहितं भिक्षापात्रं नागदन्तकेऽवस्थाप्य स्वपिति। अहं च तदन्नमुत्प्लुत्य भक्षयामि। अनन्तरं तस्य प्रियसुहृद्वीणाकर्णो नाम परिव्राजकः समायातः। तेन सह कथाप्रसङ्गावस्थितो मम त्रासार्थं जर्जरवंशखण्डेन चूडाकर्णो भूमिम-

---

## ನಾಲ್ಕನೆ ಕಥೆ

೧. ಅ॥ ಚಂಪಕಾಭಿಧಾನಾಯಾಂ = ಚಂಪಕವೆಂದು ಹೆಸರುಳ್ಳ, ನಗರ್ಯಾಂ = ಪಟ್ಟಣದಲ್ಲಿ, ಪರಿವ್ರಾಜಕಾವಸಥಃ = ಸಂನ್ಯಾಸಿಯ ಆಶ್ರಮವು, ಅಸ್ತಿ = ಇದೆ. ತತ್ರ = ಅದರಲ್ಲಿ, ಚೂಡಾಕರ್ಣಃ ನಾಮ = ಚೂಡಾಕರ್ಣನೆಂಬ, ಪರಿವ್ರಾಟ್ = ಸಂನ್ಯಾಸಿಯು, ಪ್ರತಿವಸತಿ = ವಾಸಮಾಡುತ್ತಿದ್ದಾನೆ. ಸಃ ಚ = ಅವನು, ಭೋಜನಾವಶಿಷ್ಟ = ಊಟಮಾಡಿ ಉಳಿದ, ಭಿಕ್ಷಾನ್ನ-ಸಹಿತಂ = ಭಿಕ್ಷಾನ್ನದಿಂದ ಕೂಡಿದ, ಭಿಕ್ಷಾಪಾತ್ರಂ = ಭಿಕ್ಷೆಯ ಪಾತ್ರೆಯನ್ನು, ನಾಗದಂತಕೇ = ತೂಗುಹಾಕುವ ಗೂಟದಲ್ಲಿ, ಅವಸ್ಥಾಪ್ಯ = ಇಟ್ಟು, ಸ್ವಪಿತಿ = ನಿದ್ರಿಸುತ್ತಾನೆ. ಅಹಂ ಚ = ನಾನೂ, ತದನ್ನಂ = ಆ ಅನ್ನವನ್ನು, ಉತ್ಪ್ಲುತ್ಯ = ಮೇಲಕ್ಕೆ ಹಾರಿ, ಪ್ರತ್ಯಹಂ = ಪ್ರತಿದಿನ, ಭಕ್ಷಯಾಮಿ = ತಿನ್ನುತ್ತೇನೆ. ಅನಂತರಂ = ಬಳಿಕ, ತಸ್ಯ = ಅವನ, ಪ್ರಿಯಸುಹೃತ್ = ಪ್ರಿಯ ಮಿತ್ರನಾದ, ವೀಣಾಕರ್ಣೋ ನಾಮ = ವೀಣಾಕರ್ಣನೆಂಬ, ಪರಿವ್ರಾಜಕಃ = ಸನ್ಯಾಸಿಯು, ಸಮಾಯಾತಃ = ಬಂದನು. ತೇನ ಸಹ = ಅವನೊಡನೆ, ಕಥಾಪ್ರಸಂಗಾವಸ್ಥಿತಃ = ಸಂಭಾಷಣೆಯಲ್ಲಿರುವ, ಚೂಡಾಕರ್ಣಃ = ಚೂಡಾಕರ್ಣನು, ಮಮ = ನನ್ನ, ತ್ರಾಸಾರ್ಥಂ = ಹೆದರಿಕೆಗಾಗಿ, ಜರ್ಜರ-ವಂಶಖಂಡೇನ = ಒಡೆದ ಬಿದಿರಿನ ತುಂಡಿನಿಂದ, ಭೂಮಿಂ = ನೆಲವನ್ನು, ಅತಾಡಯತ್ = ಹೊಡೆದನು. ವೀಣಾಕರ್ಣಃ ಉವಾಚ = ವೀಣಾಕರ್ಣನು

ताडयत् । वीणाकर्ण उवाच—'सखे किमिति मम कथाविरक्तो भवान् ।' चूडाकर्णेनोक्तम्—'मित्र, नाहं विरक्तः । किन्तु पश्यायं मूषिको ममापकारी सदा पात्रस्थं भिक्षान्नमुत्प्लुत्य भक्षयति ।' वीणाकर्णो नागदन्तकं विलोक्याह—'कथं मूषिकः स्वल्पबलोऽप्येतावद्दूरमुत्पतति । तदत्र केनापि कारणेन भवितव्यम् । तथा चोक्तम् ।

**१. अकस्माद्युवती वृद्धं केशेष्वाकृष्य चुम्बति ।**
**पतिं निर्दयमालिङ्ग्य हेतुरत्र भविष्यति' ॥ १०९ ॥**

---

ಹೇಳಿದನು. ಸಖೇ = ಸ್ನೇಹಿತನೆ, ಭವಾನ್ = ನೀನು, ಕಿಮಿತಿ = ಏತಕ್ಕೆ, ಮಮ = ನನ್ನ, ಕಥಾವಿರಕ್ತಃ = ಮಾತಿನಲ್ಲಿ ವೈರಾಗ್ಯಗೊಂಡವನಾಗಿ, ಅನ್ಯಾಸಕ್ತಃ = ಬೇರೆ ಕಡೆ ಆಸಕ್ತಿಯುಳ್ಳವನಾಗಿರುವಿ ? ಚೂಡಾಕರ್ಣೇನ = ಚೂಡಾಕರ್ಣನಿಂದ, ಉಕ್ತಂ = ಹೇಳಲ್ಪಟ್ಟಿತು. ಮಿತ್ರ = ಸ್ನೇಹಿತನೆ, ಅಹಂ = ನಾನು, ವಿರಕ್ತಃ = ವೈರಾಗ್ಯಗೊಂಡವನು, ನ = ಅಲ್ಲ. ಕಿಂ ತು = ಆದರೆ, ಮಮ = ನನಗೆ, ಅಪಕಾರೀ = ಅಪಕಾರ ಮಾಡುವ, ಅಯಂ ಮೂಷಿಕಃ = ಈ ಇಲಿಯು, ಉತ್ಪ್ಲುತ್ಯ = ಮೇಲಕ್ಕೆ ಹಾರಿ, ಸದಾ = ಯಾವಾಗಲೂ, ಪಾತ್ರಸ್ಥಂ = ಪಾತ್ರೆಯಲ್ಲಿರುವ, ಭಿಕ್ಷಾನ್ನಂ = ಭಿಕ್ಷಾನ್ನವನ್ನು, ಭಕ್ಷಯತಿ = ತಿನ್ನುತ್ತದೆ: ಪಶ್ಯ = ನೋಡು. ವೀಣಾಕರ್ಣಃ = ವೀಣಾಕರ್ಣನು, ನಾಗದಂತಕಂ = ಗೂಟವನ್ನು, ವಿಲೋಕ್ಯ = ನೋಡಿ, ಆಹ = ಹೇಳುತ್ತಾನೆ. ಮೂಷಿಕಃ = ಇಲಿಯು, ಸ್ವಲ್ಪಬಲಃ = ಸ್ವಲ್ಪ ಶಕ್ತಿಯುಳ್ಳದ್ದಾದರೂ, ಕಥಂ = ಹೇಗೆ, ಏತಾವದ್ದೂರಂ = ಇಷ್ಟು ದೂರ, ಉತ್ಪತತಿ = ನೆಗೆಯುತ್ತದೆ. ತತ್ = ಆದ್ದರಿಂದ, ಅತ್ರ = ಈ ವಿಷಯದಲ್ಲಿ, ಕೇನ ಅಪಿ ಕಾರಣೇನ = ಯಾವುದೊ ಒಂದು ಕಾರಣದಿಂದ, ಭವಿತವ್ಯಂ = ಆಗಿರಬೇಕು. ತಥಾ ಚ ಉಕ್ತಂ = ಹಾಗೆಯೇ ಹೇಳಲ್ಪಟ್ಟಿದೆ.

೨. ಅ॥ ಯುವತೀ = ತರುಣಿಯು, ವೃದ್ಧಂ = ಮುದುಕನಾದ, ಪತಿಂ = ಗಂಡನನ್ನು, ಕೇಶೇಷು = ಕೂದಲುಗಳಲ್ಲಿ, ಆಕೃಷ್ಯ = ಎಳೆದು, ನಿರ್ದಯಂ = ದಯವಿಲ್ಲದ ಹಾಗೆ, ಆಲಿಂಗ್ಯ = ತಬ್ಬಿಕೊಂಡು, ಅಕಸ್ಮಾತ್ = ಕಾರಣ

२. चूडाकर्णः पृच्छति—'कथमेतत् ।' वीणाकर्णः कथयति—

## कथा ५

१. 'अस्ति गौडीये कौशाम्बी नाम नगरी । तस्यां चन्दनदासनामा वणिग्महाधनो निवसति । तेन पश्चिमे वयसि वर्तमानेन कामाधिष्ठितचेतसा धनदर्पाल्लीलावती नाम वणिक्पुत्री परिणीता । सा च मकरकेतोर्विजय-

---

ವಿಲ್ಲದೆ, ಚುಂಬತಿ=ಮುದ್ದಿಡುತ್ತಾಳೆ. ಅತ್ರ=ಈ ವಿಷಯದಲ್ಲಿ, ಹೇತುಃ =ಕಾರಣವು, ಭವಿಷ್ಯತಿ=ಇರುವುದು.

ತಾ॥ ತಾರುಣ್ಯವುಳ್ಳ ಹೆಂಡತಿಯು ಮುದುಕ ಗಂಡನ ತಲೆಕೂದಲುಗಳನ್ನು ಎಳೆದುಕೊಂಡು ಘಟ್ಟಿಯಾಗಿ ಆಲಿಂಗಿಸಿ ಚುಂಬಿಸಲು ಯಾವುದೊ ಒಂದು ಕಾರಣವಿರಬೇಕು.

೨. ಅ॥ ಚೂಡಾಕರ್ಣಃ=ಚೂಡಾಕರ್ಣನು, ಪೃಚ್ಛತಿ=ಕೇಳುತ್ತಾನೆ. ಏತತ್=ಇದು, ಕಥಂ=ಹೇಗೆ ? ವೀಣಾಕರ್ಣಃ=ವೀಣಾಕರ್ಣನು, ಕಥಯತಿ=ಹೇಳುತ್ತಾನೆ.

## ಐದನೆ ಕಥೆ

೧. ಅ॥ ಗೌಡೀಯೇ=ಗೌಡದೇಶದಲ್ಲಿ, ಕೌಶಾಂಬೀ ನಾಮ ನಗರೀ=ಕೌಶಾಂಬಿಯೆಂಬ ಪಟ್ಟಣವು, ಅಸ್ತಿ=ಇದೆ. ತಸ್ಯಾಂ=ಆ ಪಟ್ಟಣದಲ್ಲಿ, ಮಹಾಧನಃ=ಬಹಳ ಐಶ್ವರ್ಯವುಳ್ಳ, ಚಂದನದಾಸನಾಮಾ=ಚಂದನದಾಸನೆಂದು ಹೆಸರುಳ್ಳ, ವಣಿಕ್=ವರ್ತಕನು, ನಿವಸತಿ=ವಾಸಮಾಡುತ್ತಾನೆ. ಪಶ್ಚಿಮೇ ವಯಸಿ=ಕೊನೆಯ ವಯಸ್ಸಿನಲ್ಲಿ (ಮುಪ್ಪಿನಲ್ಲಿ) ವರ್ತಮಾನೇನ=ಇರುವ, ಕಾಮಾಧಿಷ್ಠಿತಚೇತಸಾ=ಕಾಮದಿಂದ ಆಕ್ರಮಿಸಲ್ಪಟ್ಟ ಮನಸ್ಸುಳ್ಳ, ತೇನ=ಆ ವರ್ತಕನಿಂದ, ಧನದರ್ಪಾತ್=ಹಣದ ಅಹಂಕಾರದಿಂದ, ಲೀಲಾವತೀ ನಾಮ ವಣಿಕ್ಪುತ್ರೀ=ಲೀಲಾವತಿಯೆಂಬ ವರ್ತಕನ ಮಗಳು,

वैजयन्तीव यौवनवती बभूव। स च वृद्धपतिस्तस्याः सन्तोषाय नाभवत्।

यतः।

१. शशिनीव हिमार्तानां घर्मार्तानां रवाविव।
मनो न रमते स्त्रीणां जराजीर्णेन्द्रिये पतौ॥ ११०॥

२. अन्यच्च।
पलितेषु हि दृष्टेषु पुंसः का नाम कामिता।
भैषज्यमिव मन्यन्ते यदन्यमनसः स्त्रियः॥ १११॥

---

ಪರಿಣೀತಾ=ಮದುವೆಮಾಡಿಕೊಳ್ಳಲ್ಪಟ್ಟಳು ಸಾ ಚ=ಅವಳು, ಮಕರ-ಕೇತೋಃ=ಮನ್ಮಥನ, ವಿಜಯವೈಜಯಂತೀ ಇವ=ಜಯವನ್ನು ಸೂಚಿಸುವ ಬಾವುಟದಂತೆ, ಯೌವನವತೀ=ಯೌವನವುಳ್ಳವಳು, ಬಭೂವ=ಆದಳು, ವೃದ್ಧಪತಿಃ=ಮುದಿಗಂಡನಾದ, ಸಃ ಚ=ಅವನೂ, ತಸ್ಯಾಃ=ಆ ಲೀಲಾವತಿಯ, ಸಂತೋಷಾಯ=ತೃಪ್ತಿಗಾಗಿ, ನ ಅಭವತ್=ಆಗಲಿಲ್ಲ. ಯತಃ=ಯಾವ ಕಾರಣದಿಂದ,

೧. ಅ॥ ಹಿಮಾರ್ತಾನಾಂ=ಶೀತದಿಂದ ಪೀಡಿತರಾದವರಿಗೆ, ಶಶಿನಿ ಇವ=ಚಂದ್ರನಲ್ಲಿಯಂತೆ, ಘರ್ಮಾರ್ತಾನಾಂ=ಉಷ್ಣದಿಂದ ಬಾಧಿಸಲ್ಪಟ್ಟವರಿಗೆ, ರವೌ ಇವ=ಸೂರ್ಯನಲ್ಲಿಯಂತೆ, ಸ್ತ್ರೀಣಾಂ=ಹೆಂಗಸರಿಗೆ, ಜರಾ=ಮುಪ್ಪಿನಿಂದ, ಜೀರ್ಣ=ಶಿಥಿಲವಾದ, ಇಂದ್ರಿಯೇ=ಇಂದ್ರಿಯಗಳುಳ್ಳ, ಪತೌ=ಗಂಡನಲ್ಲಿ, ಮನಃ=ಮನಸ್ಸು, ನ ರಮತೇ=ವಿನೋದಗೊಳ್ಳುವುದಿಲ್ಲ,

ತಾ॥ ಚಳಿಯಿಂದ ನಡುಗುವವರಿಗೆ ಚಂದ್ರನಿಂದ ಸಂತೋಷವಾಗುವುದಿಲ್ಲ; ಬೇಸಿಗೆಯ ಬೇಗೆಯಿಂದ ಪೀಡಿತರಾದವರಿಗೆ ಸೂರ್ಯನಿಂದ ಸುಖವಾಗುವುದಿಲ್ಲ; ಅದರಂತೆ ಯುವತಿಯರ ಮನಸ್ಸು ಮುಪ್ಪಿನಿಂದ ಸೊರಗಿದ ಇಂದ್ರಿಯವುಳ್ಳ ಪತಿಯಿಂದ ಸಂತೋಷಗೊಳ್ಳುವುದಿಲ್ಲ.

೨. ಅ॥ ಪುಂಸಃ=ಮನುಷ್ಯನಿಗೆ, ಪಲಿತೇಷು=ಕೂದಲು ನೆರೆತಿರುವುದು,

೪. स च वृद्धपतिः तस्यामतीवानुरागवान् । यतः ।

೫. **धनाशा जीविताशा च गुर्वी प्राणभृतां सदा ।**
**वृद्धस्य तरुणी भार्या प्राणेभ्योऽपि गरीयसी ॥ ११२ ॥**

---

ದೃಷ್ಟೇಷು = ನೋಡಲ್ಪಡಲು, ಕಾಮಿತಾ = ಕಾಮಿತ್ವವು, ಕಾ ನಾಮ = ಎಂತಾದ್ದು, ಯತ್ = ಯಾವ ಕಾರಣದಿಂದ, ಅನ್ಯಮನಸಃ = ಇನ್ನೊಬ್ಬ ಯುವಕನಲ್ಲಿ ಮನಸ್ಸುಳ್ಳ, ಸ್ತ್ರಿಯಃ = ಹೆಂಗಸರು, ಭೈಷಜ್ಯಂ ಇವ = ಔಷಧ ದಂತೆ, ಮನ್ಯಂತೇ = ತಿಳಿಯುತ್ತಾರೆ.

ತಾ॥ ಮನುಷ್ಯನಿಗೆ ಕೂದಲುಗಳು ನೆರೆತ ಕೂಡಲೇ ಕಾಮವುಂಟಾಗುವು ದಿಲ್ಲ. ಆಗ ಹೆಂಗಸರು ಬೇರೆ ಯುವಕರನ್ನು ಕಾಮಿಸುತ್ತ ನೆರೆತ ಕೂದಲಿನ ಮನುಷ್ಯನನ್ನು ನೋಡಿ ಔಷಧವನ್ನು ನೋಡಿ ಬೇಸರಗೊಳ್ಳುವಂತೆ ಬೇಸರ ಗೊಳ್ಳುತ್ತಾರೆ.

೪. ಅ॥ ಸಃ ವೃದ್ಧಪತಿಃ = ಆ ಮುದಿಗಂಡನು, ತಸ್ಯಾಂ = ಆ ಲೀಲಾವತಿ ಯಲ್ಲಿ, ಅತೀವ = ಬಹಳ, ಅನುರಾಗವಾನ್ = ಪ್ರೀತಿಯುಳ್ಳವನಾಗಿರುವನು. ಯತಃ = ಯಾವಕಾರಣದಿಂದ,

೫. ಅ॥ ಪ್ರಾಣಭೃತಾಂ = ಮನುಷ್ಯರಿಗೆ, ಸದಾ = ಯಾವಾಗಲೂ, ಧನಾಶಾ = ಹಣದ ಆಶೆ, ಚ = ಮತ್ತು, ಜೀವಿತಾಶಾ = ಬದುಕುವ ಆಶೆಯು, ಗುರ್ವೀ = ಹೆಚ್ಚಾದುದು. ವೃದ್ಧಸ್ಯ = ಮುದುಕನಿಗೆ, ತರುಣೀ ಭಾರ್ಯಾ = ಯುವತಿಯಾದ ಹೆಂಡತಿಯು, ಪ್ರಾಣೇಭ್ಯಃ ಅಪಿ = ಪ್ರಾಣಕ್ಕಿಂತ, ಗರೀಯಸೀ = ಹೆಚ್ಚಾದವಳು.

ತಾ॥ ಮನುಷ್ಯರಿಗೆ ಯಾವಾಗಲೂ ಹಣದ ಆಶೆ, ಮತ್ತು ಬದುಕುವ ಇಚ್ಛೆಯು ಎಲ್ಲಕ್ಕಿಂತ ಹೆಚ್ಚಾಗಿರುವುದು. ಮುದುಕನಿಗೆ ತರುಣಿಯಾದ ಹೆಂಡತಿಯಲ್ಲಿ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಯಿರುವುದು.

१. **नोपभोक्तुं न च त्यक्तुं शक्नोति विषयान् जरी ।**
**अस्थि निर्दशनः श्वेव जिह्वया लेढि केवलम् ॥ ११३ ॥**

२. अथ सा लीलावती यौवनदर्पादतिक्रान्तकुलमर्यादा केन अपि वणिक्पुत्रेण सहानुरागवती बभूव । यतः ।

३. **स्वातन्त्र्यं पितृमन्दिरे निवसतिर्यात्रोत्सवे सङ्गति-**
**र्गोष्ठीपूरुषसन्निधावनियमो वासो विदेशे तथा ।**

---

೧ ಅ॥ ಜರೀ = ಮುದುಕನು, ವಿಷಯಾನ್ = ಸ್ತ್ರೀ ಮುಂತಾದ ವಿಷಯಗಳನ್ನು ಉಪಭೋಕ್ತುಂ = ಅನುಭವಿಸುವುದಕ್ಕೆ, ನ ಶಕ್ನೋತಿ = ಸಮರ್ಥನಾಗುವುದಿಲ್ಲ. ತ್ಯಕ್ತುಂ = ಬಿಡುವುದಕ್ಕೆ, ನ ಶಕ್ನೋತಿ = ಶಕ್ತನಾಗುವುದಿಲ್ಲ. ನಿರ್ದಶನಃ = ಹಲ್ಲಿಲ್ಲದ, ಶ್ವಾ = ನಾಯಿಯು, ಅಸ್ಥಿ ಇವ = ಮೂಳೆಯಂತೆ, ಕೇವಲಂ = ಮುಖ್ಯವಾಗಿ, ಜಿಹ್ವಯಾ = ನಾಲಿಗೆಯಿಂದ, ಲೇಢಿ = ನೆಕ್ಕುತ್ತಾನೆ (ಚಪ್ಪರಿಸುತ್ತಾನೆ).

ತಾ॥ ಹಲ್ಲಿಲ್ಲದ ನಾಯಿಯು ಮೂಳೆಯ ತುಂಡನ್ನು ನಾಲಿಗೆಯಿಂದ ಮಾತ್ರ ನೆಕ್ಕುವುದು. ಅದನ್ನು ತಿನ್ನಲು ಹಲ್ಲಿಲ್ಲ. ಬಿಡಲು ಆಶೆ ಬಿಡುವುದಿಲ್ಲ. ಹಾಗೆಯೇ ಮುದುಕನು ಸ್ತ್ರೀ ಮೊದಲಾದ ವಿಷಯಗಳಲ್ಲಿ ಆಶೆಯುಳ್ಳವನಾಗಿ ಅದನ್ನು ಅನುಭವಿಸಲೂ, ಬಿಡಲೂ ಸಮರ್ಥನಾಗುವುದಿಲ್ಲ.

೨. ಅ॥ ಅಥ = ಬಳಿಕ, ಸಾ = ಆ, ಲೀಲಾವತೀ = ಲೀಲಾವತಿಯು, ಯೌವನದರ್ಪಾತ್ = ಯೌವನದ ಮದದಿಂದ, ಅತಿಕ್ರಾಂತಕುಲಮರ್ಯಾದಾ = ವಂಶದ ಮರ್ಯಾದೆಯನ್ನು ಮೀರಿದವಳಾಗಿ, ಕೇನ ಅಪಿ ವಣಿಕ್ಪುತ್ರೇಣ ಸಹ = ಯಾವನೊ ಒಬ್ಬ ವೈಶ್ಯನ ಮಗನೊಡನೆ, ಅನುರಾಗವತೀ = ಸ್ನೇಹವುಳ್ಳವಳು, ಬಭೂವ = ಆದಳು, ಯತಃ = ಯಾವ ಕಾರಣದಿಂದ,

೩. ಅ॥ ಸ್ವಾತಂತ್ರ್ಯಂ = ಸ್ವತಂತ್ರತೆ, ಪಿತೃಮಂದಿರೇ = ತಂದೆಯ ಮನೆಯಲ್ಲಿ, ನಿವಸತಿಃ = ವಾಸಮಾಡುವಿಕೆ, ಯಾತ್ರೋತ್ಸವೇ = ಪ್ರಯಾಣ

संसर्गस्सह पुंश्चलीभिरसकृद्वृत्तेर्निजायाः क्षतिः
पत्युर्वार्धकमीर्ष्यितं प्रवसनं नाशस्य हेतुः स्त्रियाः ॥

೯. अपरं च ।

पानं दुर्जनसंसर्गः पत्या च विरहोऽटनम् ।
स्वप्नश्चान्यगृहे वासो नारीणां दूषणानि षट् ॥ ११५ ॥

---

ಮತ್ತು ಉತ್ಸವಗಳಲ್ಲಿ, ಸಂಗತಿಃ = ಸೇರುವಿಕೆ, ಗೋಷ್ಠೀಪೂರಷಸನ್ನಿಧೌ = ಸಭೆಯಲ್ಲಿ ಸೇರಿದ ಗಂಡಸರ ಹತ್ತಿರ, ಅನಿಯಮಃ = ನಿಯಮವಿಲ್ಲದಿರುವುದು, ತಥಾ = ಹಾಗೆ, ವಿದೇಶೇ = ಪರದೇಶದಲ್ಲಿ, ವಾಸಃ = ವಾಸಮಾಡುವುದು, ಪುಂಶ್ಚಲೀಭಿಃ ಸಹ = ವ್ಯಭಿಚಾರಿಣಿಯರೊಡನೆ, ಅಸಕೃತ್ = ಅನೇಕ ಸಲ, ಸಂಸರ್ಗಃ = ಸಹವಾಸ, ನಿಜಾಯಾಃ = ತನ್ನ, ವೃತ್ತೇಃ = ಜೀವನದ, ಕ್ಷತಿಃ = ಹಾನಿ, ಪತ್ಯುಃ = ಗಂಡನ, ಈರ್ಷ್ಯಿತಂ = ಅಸೂಯಕ್ಕೆ ವಿಷಯವಾದ, ವಾರ್ಧಕಂ = ಮುಪ್ಪು, ಪ್ರವಸನಂ = ದೇಶಾಂತರ ಹೋಗುವಿಕೆ ಇವು, ಸ್ತ್ರಿಯಾಃ = ಹೆಂಗಸಿನ, ನಾಶಸ್ಯ = ನಾಶಕ್ಕೆ, ಹೇತುಃ = ಕಾರಣವು.

ತಾ॥ ಸ್ವಾತಂತ್ರ್ಯ, ತಂದೆ ಮನೆಯ ವಾಸ, ಪ್ರಯಾಣ ಮತ್ತು ಉತ್ಸವಗಳಲ್ಲಿ ಜನಗಳೊಡನೆ ಸೇರುವಿಕೆ, ಹೆಂಗಸೆಂಬ ಭೇದವಿಲ್ಲದೆ ಸಭೆಯಲ್ಲಿ ಗಂಡಸರೊಡನೆ ಓಡಾಡುವುದು, ಪರಸ್ಥಳದಲ್ಲಿ ವಾಸಮಾಡುವುದು, ಅನೇಕ ಬಾರಿ ವ್ಯಭಿಚಾರಿಣಿಯರ ಸಹವಾಸ, ಜೀವನಕ್ಕಿಲ್ಲದಿರುವುದು, ಗಂಡನು ಮುದಿಯಾಗಿರುವಿಕೆ, ಅವನ ದೇಶಾಂತರ ಪ್ರಯಾಣ ಇವುಗಳು ಹೆಂಗಸು ಕೆಡಲು ಕಾರಣವಾಗಿರುವುದು.

೯. ಅ॥ ಪಾನಂ = ಕುಡಿತ, ದುರ್ಜನಸಂಸರ್ಗಃ = ದುಷ್ಟರ ಸಹವಾಸ, ಪತ್ಯಾ = ಗಂಡನಿಂದ, ವಿರಹ = ಅಗಲಿಕೆ, ಅಟನಂ = ಅಲೆಯುವುದು, ಸ್ವಪ್ನಃ = ನಿದ್ದೆ, ಅನ್ಯಗೃಹೇ = ಇನ್ನೊಬ್ಬರ ಮನೆಯಲ್ಲಿ, ವಾಸಃ = ವಾಸಮಾಡುವುದು, ಷಟ್ = ಇವು ಆರು, ನಾರೀಣಾಂ = ಹೆಂಗಸರ, ದೂಷಣಾನಿ = ದೋಷಗಳು.

೧೦. स्थानं नास्ति क्षणो नास्ति नास्ति प्रार्थयिता नरः ।
तेन नारद नारीणां सतीत्वमुपजायते ॥ ११६ ॥

೧೧. न स्त्रीणामप्रियः कश्चित्प्रियो वापि न विद्यते ।
गावस्तृणमिवारण्ये प्रार्थयन्ति नवं नवम् ॥ ११७ ॥

---

ತಾ॥ ಮದ್ಯಪಾನ, ದುಷ್ಟ ಸಹವಾಸ, ಗಂಡನ ಅಗಲಿಕೆ, ಇಷ್ಟಬಂದಲ್ಲಿ ಅಲೆಯುವುದು, ನಿದ್ದೆ, ಇನ್ನೊಬ್ಬರ ಮನೆಯಲ್ಲಿ ವಾಸಮಾಡುವುದು ಇವು ಆರು ಹೆಂಗಸರಿಗೆ ಕೇಡನ್ನುಂಟು ಮಾಡುವುವು.

೧೦. ಅ॥ ನಾರದ=ನಾರದನೆ, ಸ್ಥಾನಂ ನಾಸ್ತಿ=ಸ್ಥಳವು ಇಲ್ಲ, ಕ್ಷಣಃ =ಸಂತೋಷ ಅಥವಾ ಕೆಲಸಮಾಡದೆ ಸುಮ್ಮನಿರುವಿಕೆ, ನಾಸ್ತಿ=ಇಲ್ಲ, ಪ್ರಾರ್ಥಯಿತಾ=ಬೇಡುವ, ನರಃ=ಮನುಷ್ಯನು, ನಾಸ್ತಿ=ಇಲ್ಲ. ತೇನ= ಆದರಿಂದ, ನಾರೀಣಾಂ=ಹೆಂಗಸರಿಗೆ, ಸತೀತ್ವಂ=ಪತಿವ್ರತೆತನವು, ಉಪ-ಜಾಯತೇ=ಉಂಟಾಗುತ್ತದೆ.

ತಾ॥ ನಾರದನೆ ಸ್ಥಳ, ಸಮಯ. ಅಪೇಕ್ಷಿಸುವ ಮನುಷ್ಯ ಇವುಗಳಿಲ್ಲದಿದ್ದಲ್ಲಿ ಹೆಂಗಸರು ಪತಿವ್ರತೆಯಾಗಿರುವರು.

೧೧. ಅ॥ ಸ್ತ್ರೀಣಾಂ=ಹೆಂಗಸರಿಗೆ, ಕಶ್ಚಿತ್=ಒಬ್ಬನು, ಅಪ್ರಿಯಃ =ಪ್ರಿಯನಲ್ಲದವನು, ನ=ಇಲ್ಲ. ಪ್ರಿಯಃ ವಾಪಿ=ಪ್ರಿಯನಾದವನೂ, ನ ವಿದ್ಯತೇ=ಇಲ್ಲ. ಗಾವಃ=ಹಸುಗಳು, ಅರಣ್ಯೇ=ಕಾಡಿನಲ್ಲಿ, ತೃಣಂ ಇವ=ಹುಲ್ಲಿನಂತೆ, ನವಂ ನವಂ=ಹೊಸ ಹೊಸ ಮನುಷ್ಯನನ್ನು, ಪ್ರಾರ್ಥಯಂತಿ=ಅಪೇಕ್ಷಿಸುತ್ತಾರೆ.

ತಾ॥ ಹೆಂಗಸರಿಗೆ ಇವನು ಪ್ರಿಯನಲ್ಲ. ಇವನು ಪ್ರಿಯನು ಎಂಬುದು ನಿಶ್ಚಿತವಾಗಿ ಇಲ್ಲ. ಹಸುಗಳು ಕಾಡಿನಲ್ಲಿ ಹೊಸ ಹೊಸ ಹುಲ್ಲನ್ನು ಅಪೇಕ್ಷಿಸುವಂತೆ ಅವರು ಹೊಸ ಹೊಸ ಮನುಷ್ಯನನ್ನು ಅಪೇಕ್ಷಿಸುತ್ತಾರೆ.

೧೨. अपरं च ।

घृतकुम्भसमा नारी तप्ताङ्गारसमः पुमान् ।
तस्माद्घृतं च वह्निं च नैकत्र स्थापयेद्बुधः ॥ ११८ ॥

೧೩. न लज्जा न विनीतत्वं न दाक्षिण्यं न भीरुता ।
प्रार्थनाभाव एवैकं सतीत्वे कारणं स्त्रियाः ॥ ११९ ॥

---

೧೨. ಅ॥ ಅಪರಂ ಚ, ನಾರೀ=ಹೆಂಗಸು, ಘೃತಕುಂಭ=ತುಪ್ಪದ ಗಡಿಗೆಗೆ, ಸಮಾ=ಸಮಾನಳು. ಪುಮಾನ್=ಗಂಡಸು, ತಪ್ತಾಂಗಾರ= ಬೆಂಕಿ ಕೆಂಡಕ್ಕೆ, ಸಮಃ=ಸಮಾನನು. ತಸ್ಮಾತ್=ಆದ್ದರಿಂದ, ಬುಧಃ= ಪಂಡಿತನು, ಘೃತಂ ಚ=ತುಪ್ಪವನ್ನೂ, ವಹ್ನಿಂ ಚ=ಬೆಂಕಿಯನ್ನೂ; ಏಕತ್ರ=ಒಂದೇಕಡೆ, ನ ಸ್ಥಾಪಯೇತ್=ಇಡಕೂಡದು.

ತಾ॥ ಹೆಂಗಸು ತುಪ್ಪ ತುಂಬಿದ ಗಡಿಗೆಯಂತೆಯೂ, ಗಂಡಸು ಬೆಂಕಿಯ ಕೆಂಡದಂತೆಯೂ ಇರುವರು. ಆದ್ದರಿಂದ ಬೆಂಕಿಯಿಂದ ತುಪ್ಪವು ಕರಗಿ ಸೋರಿ ಹೋಗುವಂತೆ ಹೆಂಗಸು ಗಂಡಸಿನ ಸಹವಾಸದಿಂದ ಕೆಡುವ ಸಂಭವ ಇರುವುದರಿಂದ ಜಾಣನು ಅವರಿಬ್ಬರು ಒಂದೆಡೆ ಸೇರದಂತೆ ನೋಡಿಕೊಳ್ಳಬೇಕು.

೧೩. ಅ॥ ಸ್ತ್ರಿಯಾಃ=ಹೆಂಗಸಿನ, ಸತೀತ್ವೇ=ಪಾತಿವ್ರತ್ಯದಲ್ಲಿ, ಲಜ್ಜಾ =ನಾಚಿಕೆಯು, ನ ಕಾರಣಂ=ಕಾರಣವಲ್ಲ. ವಿನೀತತ್ವಂ=ವಿನಯವು, ನ=ಕಾರಣವಲ್ಲ. ದಾಕ್ಷಿಣ್ಯಂ=ದಾಕ್ಷಿಣ್ಯವು, ನ. ಭೀರುತಾ=ಭಯವು, ನ=ಕಾರಣವಲ್ಲ. ಪ್ರಾರ್ಥನಾಭಾವಃ ಏಕಂ ಏವ=ಬೇಡಿಕೆಯೊಂದಿರುವುದಿಲ್ಲದಿರುವುದೇ, ಕಾರಣಂ=ಕಾರಣವು.

ತಾ॥ ಹೆಂಗಸು ಪತಿವ್ರತೆಯಾಗಿರುವುದಕ್ಕೆ ಅವಳಲ್ಲಿರುವ ನಾಚಿಕೆ, ವಿಧೇಯತೆ, ದಾಕ್ಷಿಣ್ಯ, ಭಯ ಇವುಗಳು ಕಾರಣವಲ್ಲ. ಅವಳನ್ನು ಒಲಿಸುವ ಕಾಮಿಯಿಲ್ಲದಿರುವುದೇ ಕಾರಣ. ಹಾಗೆ ಅವನಿದ್ದರೆ ಎಂತಹ ಹೆಂಗಸೂ ವ್ಯಭಿಚಾರಿಣಿಯಾಗುವಳು.

Funding: Tattva Heritage Foundation,Kolkata. Digitization: eGangotri.



೧೪. पिता रक्षति कौमारे भर्ता रक्षति यौवने ।
पुत्रश्च स्थाविरे भावे न स्त्री स्वातन्त्र्यमर्हति ॥ १२० ॥

೧೫. एकदा सा लीलावती रत्नावलीकिरणकर्बुरे पर्यङ्के तेन वणिक्पुत्रेण सह विश्रम्भालापैः सुखासीना तमलक्षितोपस्थितं पतिमवलोक्य सहसोत्थाय केशेष्वाकृष्य चुम्बितवती । तेनावसरेण जारश्च पलायितः । उक्तं च ।

---

೧೪. ಅ॥ ಕೌಮಾರೇ=ಕುಮಾರಿಯ ಸ್ಥಿತಿಯಲ್ಲಿ, ಪಿತಾ=ತಂದೆಯು, ರಕ್ಷತಿ=ಕಾಪಾಡುತ್ತಾನೆ. ಯೌವನೇ=ತಾರುಣ್ಯದಲ್ಲಿ, ಭರ್ತಾ=ಗಂಡನು, ರಕ್ಷತಿ=ಕಾಪಾಡುತ್ತಾನೆ. ಸ್ಥಾವಿರೇ ಭಾವೇ=ಮುದಿತನದಲ್ಲಿ, ಪುತ್ರಃ ಚ =ಮಗನು, ರಕ್ಷತಿ. ಸ್ತ್ರೀ=ಹೆಂಗಸು, ಸ್ವಾತಂತ್ರ್ಯಂ ನ ಅರ್ಹತಿ=ಸ್ವತಂತ್ರಳಾಗಿರಲು ಯೋಗ್ಯಳಲ್ಲ.

ತಾ॥ ಹೆಂಗಸನ್ನು ಬಾಲ್ಯದಲ್ಲಿ ತಂದೆಯೂ, ಯೌವನದಲ್ಲಿ ಗಂಡನೂ, ಮುಪ್ಪಿನಲ್ಲಿ ಮಗನೂ ರಕ್ಷಿಸುತ್ತಾರೆ. ಆದ್ದರಿಂದ ಅವಳು ಸ್ವತಂತ್ರಳಾಗಿರಲು ಯೋಗ್ಯಳಲ್ಲ.

೧೫. ಅ॥ ಏಕದಾ=ಒಂದಾನೊಂದು ವೇಳೆ, ಸಾ ಲೀಲಾವತೀ=ಆ ಲೀಲಾವತಿಯು, ರತ್ನಾವಲೀ=ರತ್ನಗಳ ಸಮೂಹದ, ಕಿರಣ=ಕಾಂತಿಯಿಂದ, ಕರ್ಬುರೇ=ನಾನಾ ಬಣ್ಣವಾದ, ಪರ್ಯಂಕೇ=ಮಂಚದಲ್ಲಿ, ತೇನ=ಆ, ವಣಿಕ್ಪುತ್ರೇಣ ಸಹ=ವರ್ತಕನ ಮಗನೊಡನೆ, ವಿಶ್ರಂಭಾಲಾಪೈಃ=ನಂಬಿಕೆಯ ಮಾತುಗಳಿಂದ, ಸುಖಾಸೀನಾ=ಸುಖವಾಗಿ ಕೂತವಳಾಗಿ, ಅಲಕ್ಷಿತ=ಕಾಣಲ್ಪಡದೆ, ಉಪಸ್ಥಿತಂ=ಸಮೀಪಿಸಿದ, ತಂ=ಆ, ಪತಿಂ=ಗಂಡನನ್ನು, ಅವಲೋಕ್ಯ=ನೋಡಿ, ಸಹಸಾ=ಕೂಡಲೆ, ಉತ್ಥಾಯ=ಎದ್ದು, ಕೇಶೇಷು ಆಕೃಷ್ಯ=ತಲೆಕೂದಲನ್ನು ಹಿಡಿದು ಎಳೆದು, ಗಾಢಂ ಆಲಿಂಗ್ಯ=ಘಟ್ಟಿಯಾಗಿ ಆಲಿಂಗಿಸಿ, ಚುಂಬಿತವತೀ=ಮುದ್ದಿಟ್ಟಳು. ತೇನ ಅವಸರೇಣ=ಆ ಸಮಯದಲ್ಲಿ, ಜಾರಶ್ಚ=ಮಿಂಡನೂ, ಪಲಾಯಿತಃ=ಓಡಿದನು. ಉಕ್ತಂ ಚ=ಹೇಳಲ್ಪಟ್ಟಿದೆ.

೧೯. **उशना वेद यच्छास्त्रं यच्च वेद बृहस्पतिः ।**
**स्वभावेनैव तच्छास्त्रं स्त्रीबुद्धौ सुप्रतिष्ठितम् ॥ १२१ ॥**

೧೭. तदालिङ्गनमवलोक्य समीपवर्तिनी कुट्टन्यचिन्तयत्—'अकस्मादियमेनमुपगूढवती' इति । ततस्तया कुट्टन्या तत्कारणं परिज्ञाय सा लीलावती गुप्तेन दण्डिता । अतोऽहं ब्रवीमि—'अकस्माद्युवती वृद्धम्' इत्यादि । मूषिकबलोपस्तम्भेन केनापि कारणेनात्र भवितव्यम् ।' क्षणं विचिन्त्य परिव्राजकेनोक्तम्—'कारणं चात्र धनबाहुल्यं भविष्यति । यतः ।

---

೧೯. ಅ॥ ಯತ್ ಶಾಸ್ತ್ರಂ=ಯಾವ ಶಾಸ್ತ್ರವನ್ನು, ಉಶನಾ=ಶುಕ್ರಾಚಾರ್ಯರು, ವೇದ=ತಿಳಿಯುತ್ತಾರೊ; ಯತ್ ಚ=ಯಾವ ಶಾಸ್ತ್ರವನ್ನು, ಬೃಹಸ್ಪತಿಃ=ಬೃಹಸ್ಪತ್ಯಾಚಾರ್ಯರು, ವೇದ= ತಿಳಿಯುತ್ತಾರೊ; ತತ್ ಶಾಸ್ತ್ರಂ=ಆ ಶಾಸ್ತ್ರವು, ಸ್ತ್ರೀಬುದ್ಧೌ=ಹೆಂಗಸಿನ ಬುದ್ಧಿಯಲ್ಲಿ, ಸ್ವಭಾವೇನೈವ=ಸ್ವಭಾವದಿಂದಲೇ, ಸುಪ್ರತಿಷ್ಠಿತಂ=ಚೆನ್ನಾಗಿ ನೆಲೆಸಿರುವುದು.

ತಾ॥ ಶುಕ್ರಾಚಾರ್ಯರೂ, ಬೃಹಸ್ಪತ್ಯಾಚಾರ್ಯರೂ ಓದಿ ತಿಳಿದಿರುವ ನೀತಿ ಶಾಸ್ತ್ರವನ್ನು ಹೆಂಗಸು ಸ್ವಾಭಾವಿಕವಾಗಿಯೇ ತಿಳಿದಿರುತ್ತಾಳೆ.

೧೭. ಅ॥ ತತ್ = ಅವಳ, ಆಲಿಂಗನಂ = ತಬ್ಬಿಕೊಳ್ಳುವಿಕೆಯನ್ನು, ಸಮೀಪವರ್ತಿನೀ = ಹತ್ತಿರದಲ್ಲಿರುವ, ಕುಟ್ಟನೀ = ತಲೆಹಿಡಿಕಿಯು, ಅವಲೋಕ್ಯ=ನೋಡಿ, ಅಚಿಂತಯತ್=ಆಲೋಚಿಸಿದಳು. ಇಯಂ=ಇವಳು, ಅಕಸ್ಮಾತ್=ಕಾರಣವಿಲ್ಲದೆ, ಏನಂ=ಈ ಗಂಡನನ್ನು, ಉಪಗೂಢವತೀ= ಆಲಿಂಗಿಸಿದಳು. ಇತಿ. ತತಃ=ಬಳಿಕ, ತಯಾ ಕುಟ್ಟನ್ಯಾ=ಆ ತಲೆಹಿಡಿಕಿಯಿಂದ, ತತ್ಕಾರಣಂ=ಆ ಆಲಿಂಗನೆಯ ಕಾರಣವನ್ನು, ಪರಿಜ್ಞಾಯ= ತಿಳಿದು, ಸಾ=ಆ, ಲೀಲಾವತೀ=ಲೀಲಾವತಿಯು, ಗುಪ್ತೇನ=ಗುಟ್ಟಿನಿಂದ, ದಂಡಿತಾ=ಶಿಕ್ಷಿಸಲ್ಪಟ್ಟಳು. ಅತಃ=ಈ ಕಾರಣದಿಂದಲೇ, ಅಹಂ=ನಾನು, ಬ್ರವೀಮಿ=ಹೇಳುತ್ತೇನೆ. 'ಅಕಸ್ಮಾದ್ಯುವತೀ ವೃದ್ಧಂ ಇತ್ಯಾದಿ' ಈ ಪದ್ಯವನ್ನು. ಮೂಷಿಕ=ಇಲಿಯ, ಬಲ=ಶಕ್ತಿಗೆ, ಉಪಸ್ತಂಭೇನ=ಆಧಾರ

೧೮. धनवान्बलवांल्लोके सर्वः सर्वत्र सर्वदा ।
प्रभुत्वं धनमूलं हि राज्ञामप्युपजायते' ॥ १२२ ॥

೧೯. ततः खनित्रमादाय तेन विवरं खनित्वा चिरसञ्चितं मम धनं गृहीतम् । ततः प्रभृति निजशक्तिहीनः सत्त्वोत्साहरहितः स्वाहारमप्युत्पादयितुमक्षमः सत्रासं मन्दं मन्दमुपसर्पंश्चूडाकर्णेनावलोकितः । ततस्तेनोक्तम्—

---

ವಾದ, ಕೇನ ಅಪಿ ಕಾರಣೇನ=ಯಾವುದೊ ಒಂದು ಕಾರಣದಿಂದ, ಅತ್ರ =ಇಲ್ಲಿ, ಭವಿತವ್ಯಂ=ಇರಬೇಕು. (ಇಲಿಯ ಶಕ್ತಿಯನ್ನು ಹೆಚ್ಚಿಸುವ ಯಾವುದೋ ಒಂದು ಕಾರಣವು ಇಲ್ಲಿರಬೇಕು). ಪರಿವ್ರಾಜಕೇನ=ಸನ್ಯಾಸಿಯಿಂದ, ಕ್ಷಣಂ=ಸ್ವಲ್ಪಹೊತ್ತು, ವಿಚಿಂತ್ಯ=ಆಲೋಚಿಸಿ, ಉಕ್ತಂ= ಹೇಳಲ್ಪಟ್ಟಿತು. ಅತ್ರ=ಈ ವಿಷಯದಲ್ಲಿ, ಧನಬಾಹುಲ್ಯಂ=ಹೆಚ್ಚು ಹಣವುಳ್ಳತನವು, ಕಾರಣಂ=ಕಾರಣವು, ಭವಿಷ್ಯತಿ=ಆಗುವುದು. ಯತಃ= ಯಾವ ಕಾರಣದಿಂದ.

೧೮. ಅ॥ ಲೋಕೇ = ಪ್ರಪಂಚದಲ್ಲಿ, ಸರ್ವತ್ರ = ಎಲ್ಲಾ ಕಡೆಯಲ್ಲಿ, ಸರ್ವದಾ=ಯಾವಾಗಲೂ, ಸರ್ವಃ=ಎಲ್ಲ, ಧನವಾನ್=ಹಣವುಳ್ಳವನು, ಬಲವಾನ್=ಬಲವುಳ್ಳವನು, ಭವಿಷ್ಯತಿ=ಆಗುವನು. ರಾಜ್ಞಾಂ ಅಪಿ= ದೊರೆಗಳಿಗೂ, ಪ್ರಭುತ್ವಂ=ಸ್ವಾಮಿತ್ವವು, ಧನಮೂಲಂ ಹಿ=ಹಣವೇ ಕಾರಣವಾಗುಳ್ಳದು, ಉಪಜಾಯತೇ=ಆಗುವುದು.

ತಾ॥ ಪ್ರಪಂಚದಲ್ಲಿ ಎಲ್ಲೆಡೆಯಲ್ಲಿಯೂ ಯಾವಾಗಲೂ ಹಣವುಳ್ಳವನೇ ಬಲವುಳ್ಳವನು. ರಾಜರೂ ಹಣದಿಂದಲೇ ಪ್ರಭುಗಳಾಗಿರುವರು.

೧೯. ಅ॥ ತತಃ=ಬಳಿಕ, ಖನಿತ್ರಂ=ಗುದ್ದಲಿಯನ್ನು, ಆದಾಯ= ತೆಗೆದುಕೊಂಡು, ತೇನ=ಅವನಿಂದ, ವಿವರಂ=ಕುಣಿಯನ್ನು, ಖನಿತ್ವಾ= ಅಗೆದು, ಚಿರಸಂಚಿತಂ=ಬಹಳ ಕಾಲದಿಂದ ಸಂಪಾದಿಸಲ್ಪಟ್ಟ, ಮಮ= ನನ್ನ, ಧನಂ = ಹಣವು, ಗೃಹೀತಂ = ತೆಗೆದುಕೊಳ್ಳಲ್ಪಟ್ಟಿತು. ತತಃ ಪ್ರಭೃತಿ = ಅದು ಮೊದಲ್ಗೊಂಡು, ನಿಜಶಕ್ತಿಹೀನಃ=ಸ್ವಂತ ಶಕ್ತಿ ಇಲ್ಲದ,

೨೦. 'धनेन बलवांल्लोके धनाद्भवति पण्डितः ।
पश्यैनं मूषिकं पापं स्वजातिसमतां गतम् ॥ १२३ ॥

೨೧. किं च ।
अर्थेन तु विहीनस्य पुरुषस्याल्पमेधसः ।
क्रियाः सर्वा विनश्यन्ति ग्रीष्मे कुसरितो यथा ॥ १२४ ॥

---

ಸತ್ತ್ವ=ಬಲ, ಉತ್ಸಾಹ=ಉತ್ಸಾಹ ಇವುಗಳಿಂದ, ರಹಿತಃ=ಇಲ್ಲದವನಾದ, ಸ್ವಾಹಾರಂ ಅಪಿ=ನನ್ನ ಆಹಾರವನ್ನೂ, ಉತ್ಪಾದಯಿತುಂ=ಉಂಟು ಮಾಡುವುದಕ್ಕೆ, ಅಕ್ಷಮಃ=ಅಶಕ್ತನಾದ ನಾನು, ಸತ್ರಾಸಂ=ಭಯದಿಂದ ಸಹಿತನಾಗಿ, ಮಂದಂ ಮಂದಂ=ಮೆಲ್ಲಮೆಲ್ಲನೆ, ಉಪಸರ್ಪನ್=ಸಮೀಪಿಸುತ್ತಿರುವವನಾಗಿ, ಚೂಡಾಕರ್ಣೇನ=ಚೂಡಾಕರ್ಣನಿಂದ, ಅವಲೋಕಿತಃ=ನೋಡಲ್ಪಟ್ಟೆನು. ತತಃ=ಬಳಿಕ, ತೇನ=ಆ ಚೂಡಾಕರ್ಣನಿಂದ, ಉಕ್ತಂ=ಹೇಳಲ್ಪಟ್ಟಿತು.

೨೦. ಅ॥ ಲೋಕೇ=ಪ್ರಪಂಚದಲ್ಲಿ, ಧನೇನ=ಹಣದಿಂದ, ಬಲವಾನ್=ಬಲವುಳ್ಳವನು ಆಗುತ್ತಾನೆ. ಧನಾತ್=ಹಣದಿಂದ, ಪಂಡಿತಃ=ವಿದ್ವಾಂಸನು, ಭವತಿ=ಆಗುತ್ತಾನೆ. ಸ್ವಜಾತಿಸಮತಾಂ=ತನ್ನ ಜಾತಿಯ ಸಾಮ್ಯವನ್ನು, ಗತಂ=ಹೊಂದಿದ, ಪಾಪಂ=ಪಾಪಿಷ್ಠನಾದ, ಏನಂ=ಈ, ಮೂಷಿಕಂ=ಇಲಿಯನ್ನು, ಪಶ್ಯ=ನೋಡು.

ತಾ॥ ಲೋಕದಲ್ಲಿ ಹಣವುಳ್ಳವನು ಬಲಿಷ್ಠನೂ, ವಿದ್ವಾಂಸನೂ ಆಗುವನು. ಈಗ ಈ ಇಲಿಯು ಹಣವಿಲ್ಲದ್ದರಿಂದ ನಿರ್ಬಲವಾಗಿ ತನ್ನ ಜಾತಿಯ ಇತರ ಇಲಿಯಂತಾಗಿದೆ ನೋಡು.

೨೧. ಅ॥ ಕಿಂ ಚ=ಮತ್ತು. ಅರ್ಥೇನ=ಹಣದಿಂದ, ವಿಹೀನಸ್ಯ=ರಹಿತನಾದ, ಅಲ್ಪಮೇಧಸಃ=ಸ್ವಲ್ಪ ಬುದ್ಧಿಯುಳ್ಳ, ಪುರುಷಸ್ಯ=ಮನುಷ್ಯನ, ಸರ್ವಾಃ=ಎಲ್ಲ, ಕ್ರಿಯಾಃ=ಕೆಲಸಗಳು, ಗ್ರೀಷ್ಮೇ=ಬೇಸಿಗೆಯಲ್ಲಿ, ಕುಸರಿತಃ ಯಥಾ=ಸಣ್ಣ ನದಿಯಂತೆ, ವಿನಶ್ಯಂತಿ=ಹಾಳಾಗುತ್ತವೆ.

೨೨. अपरं च ।

यस्यार्थास्तस्य मित्राणि यस्यार्थास्तस्य बान्धवाः ।
यस्यार्थाः स पुमांल्लोके यस्यार्थाः स हि पण्डितः ॥१२५॥

೨೩. अन्यच्च ।

अपुत्रस्य गृहं शून्यं सन्मित्ररहितस्य च ।
मूर्खस्य च दिशः शून्याः सर्वशून्या दरिद्रता ॥ १२६ ॥

---

ತಾ॥ ಹಣವಿಲ್ಲದ ದಡ್ಡನ ಕೆಲಸವೆಲ್ಲ ಬೇಸಿಗೆಯಲ್ಲಿ ಸಣ್ಣ ನದಿಯ ನೀರು ಒಣಗುವಂತೆ ಹಾಳಾಗುವುವು.

೨೨. ಅ॥ ಅಪರಂ ಚ=ಮತ್ತು, ಲೋಕೇ=ಪ್ರಪಂಚದಲ್ಲಿ, ಯಸ್ಯ=ಯಾವನಿಗೆ, ಅರ್ಥಾಃ=ಹಣಗಳಿವೆಯೋ; ತಸ್ಯ=ಅವನಿಗೆ, ಮಿತ್ರಾಣಿ=ಸ್ನೇಹಿತರು. ಯಸ್ಯ=ಯಾವನಿಗೆ, ಅರ್ಥಾಃ=ಹಣಗಳಿವೆಯೋ, ತಸ್ಯ=ಅವನಿಗೆ, ಬಾಂಧವಾಃ=ಬಂಧುಗಳು. ಯಸ್ಯ ಅರ್ಥಾಃ, ಸಃ=ಅವನು, ಪುಮಾನ್=ಮನುಷ್ಯನು. ಯಸ್ಯ ಅರ್ಥಾಃ, ಸಃ ಹಿ = ಅವನು, ಪಂಡಿತಃ = ವಿದ್ವಾಂಸನು.

ತಾ॥ ಪ್ರಪಂಚದಲ್ಲಿ ಹಣವುಳ್ಳವನಿಗೆ ಸ್ನೇಹಿತರೂ ಬಂಧುಗಳೂ ಇರುವರು. ಹಣವುಳ್ಳವನೇ ಮನುಷ್ಯ ಮತ್ತು ವಿದ್ವಾಂಸನು.

೨೩. ಅ॥ ಅನ್ಯತ್ ಚ=ಮತ್ತು, ಅಪುತ್ರಸ್ಯ=ಮಗನಿಲ್ಲದವನ, ಚ=ಮತ್ತು, ಸನ್ಮಿತ್ರರಹಿತಸ್ಯ=ಒಳ್ಳೆ ಸ್ನೇಹಿತರಿಲ್ಲದವನ, ಗೃಹಂ=ಮನೆಯು, ಶೂನ್ಯಂ=ಬರಿದಾದುದು. ಮೂರ್ಖಸ್ಯ=ಮೂರ್ಖನ; ದಿಶಃ=ದಿಕ್ಕುಗಳು, ಶೂನ್ಯಾಃ=ಬರಿದಾದುವು. ದರಿದ್ರತಾ=ಬಡತನವು, ಸರ್ವಶೂನ್ಯಾ=ಏನೂ ಇಲ್ಲದುದು.

ತಾ॥ ಮಕ್ಕಳಿಲ್ಲದವನ ಮತ್ತು ಒಳ್ಳೆ ಸ್ನೇಹಿತರಿಲ್ಲದವನ ಮನೆಯು ಏನೂ ಇಲ್ಲದಂತೆಯೆ. ಮೂಢನು ದಿಕ್ಕಿಲ್ಲದವನು. ಎಂದರೆ ಅವನಿಗೆ ಯಾರೂ ಸಹಾಯ ಮಾಡುವುದಿಲ್ಲ. ಹಾಗೆಯೇ ಬಡವನಿಗೂ ಯಾವ ಬೆಂಬಲವೂ ಇರುವುದಿಲ್ಲ.

७४. अपरं च ।

तानीन्द्रियाण्यविकलानि तदेव नाम
सा बुद्धिरप्रतिहता वचनं तदेव ।
अर्थोष्मणा विरहितः पुरुषः स एव
अन्यः क्षणेन भवतीति विचित्रमेतत्' ॥ १२७ ॥

७५. एतत्सर्वमाकर्ण्य मयालोचितम्—ममात्रावस्थानमयुक्तमिदानीम् । यच्चान्यस्मा एतद्वृत्तान्तकथनं तदप्यनुचितम् । यतः ।

---

७४. ಅ॥ ಅಪರಂ ಚ, ಅವಿಕಲಾನಿ=ದುರ್ಬಲವಾಗದ, ಇಂದ್ರಿಯಾಣಿ =ಇಂದ್ರಿಯಗಳು, ತಾನಿ=ಅವು. ನಾಮ=ಹೆಸರು, ತದೇವ=ಅದೇ. ಅಪ್ರತಿಹತಾ=ತಡೆಯಿಲ್ಲದ, ಬುದ್ಧಿಃ=ಬುದ್ಧಿಯು, ಸಾ=ಅದು. ವಚನಂ =ಮಾತು, ತದೇವ=ಅದೇ. ಅರ್ಥೋಽಷ್ಮಣಾ=ಹಣದ ಬಿಸಿಯಿಂದ, ವಿರಹಿತಃ=ಬಿಡಲ್ಪಟ್ಟ, ಸಃ ಏವ=ಅದೇ, ಪುರುಷಃ=ಮನುಷ್ಯನು, ಕ್ಷಣೇನ =ಕ್ಷಣಕಾಲದಲ್ಲಿ, ಅನ್ಯಃ=ಬೇರೆ, ಭವತೀತಿ=ಆಗುತ್ತಾನೆಂದು, ಏತತ್ =ಇದು, ವಿಚಿತ್ರಂ=ಆಶ್ಚರ್ಯವು.

ತಾ॥ ಹಿಂದಿನ ಸರಿಯಾಗಿರುವ ಕಣ್ಣು ಮೊದಲಾದ ಅದೇ ಇಂದ್ರಿಯ ಗಳೂ, ಅದೇ ಹೆಸರೂ, ತಡೆಯಿಲ್ಲದ ಅದೇ ಬುದ್ಧಿಯೂ, ಅದೇ ಮಾತೂ ಇದ್ದರೂ ಅದೇ ಮನುಷ್ಯನು ಹಣವಿಲ್ಲದಿದ್ದರೆ ಸ್ವಲ್ಪ ಹೊತ್ತಿನಲ್ಲಿಯೇ ಬೇರೆ ಯವನಂತಾಗುವನು ಎಂಬುದು ಆಶ್ಚರ್ಯ. ಎಂದರೆ ಹಣವು ಎಲ್ಲವನ್ನೂ ಮಾರಿಸತಕ್ಕುದು.

೭೫. ಅ॥ ಏತತ್ಸರ್ವಂ=ಇದನ್ನೆಲ್ಲ, ಆಕರ್ಣ್ಯ=ಕೇಳಿ, ಮಯಾ= ನನ್ನಿಂದ, ಆಲೋಚಿತಂ=ಚಿಂತಿಸಲ್ಪಟ್ಟಿತು. ಇದಾನೀಂ=ಈಗ, ಮಮ =ನನ್ನ, ಅತ್ರ=ಇಲ್ಲಿ, ಅವಸ್ಥಾನಂ=ಇರುವಿಕೆಯು, ಅಯುಕ್ತಂ= ಉಚಿತವಲ್ಲ. ಅನ್ಯಸ್ಮೈ=ಇತರನಿಗೆ, ಏತತ್=ಈ, ವೃತ್ತಾಂತಕಥನಂ=

೨೬. अर्थनाशं मनस्तापं गृहे दुश्चरितानि च ।
वञ्चनं चापमानं च मतिमान्न प्रकाशयेत् ॥ १२८ ॥

೨೭. अपि च ।
आयुर्वित्तं गृहच्छिद्रं मन्त्रमैथुनभेषजम् ।
तपो दानापमानं च नव गोप्यानि यत्नतः ॥ १२९ ॥

---

ಸಮಾಚಾರವನ್ನು ಹೇಳುವಿಕೆಯು, ಯತ್=ಯಾವುದೊ, ತತ್ ಅಪಿ= ಅದೂ, ಅನುಚಿತಂ=ಯೋಗ್ಯವಲ್ಲ, ಯತಃ=ಏತಕ್ಕೆಂದರೆ.

೨೬. ಅ॥ ಮತಿಮಾನ್=ಬುದ್ಧಿವಂತನು, ಅರ್ಥನಾಶಂ=ಹಣದ ನಾಶ ವನ್ನು, ಮನಸ್ತಾಪಂ = ವೈಮನಸ್ಯವನ್ನು, ಗೃಹೇ = ಮನೆಯಲ್ಲಿರುವ, ದುಶ್ಚರಿತಾನಿ ಚ=ಕೆಟ್ಟ ನಡತೆಗಳನ್ನೂ, ವಂಚನಂ ಚ=ಮೋಸವನ್ನೂ, ಅಪಮಾನಂ ಚ = ಅವಮಾನವನ್ನೂ, ನ ಪ್ರಕಾಶಯೇತ್ = ಪ್ರಕಟಿಸ ಬಾರದು.

ತಾ॥ ಜಾಣನು ಹಣದ ನಷ್ಟ, ಮತ್ತೊಬ್ಬನಲ್ಲಿರುವ ವೈಮನಸ್ಯ, ಮನೆ ಯಲ್ಲಿ ನಡೆಯುತ್ತಿರುವ ದುರ್ನಡತೆಗಳು, ಮೋಸ, ಅವಮಾನ ಇವುಗಳನ್ನು ಮತ್ತೊಬ್ಬರಿಗೆ ತೋರಿಸಿಕೊಳ್ಳಬಾರದು.

೨೭. ಅ॥ ಆಯುಃ=ಆಯುಸ್ಸು, ವಿತ್ತಂ=ಹಣ, ಗೃಹಚ್ಛಿದ್ರಂ=ಮನೆ ಯಲ್ಲಿರುವ ದೋಷ, ಮಂತ್ರ=ಮಂತ್ರಾಲೋಚನೆ ಅಥವಾ ಮಂತ್ರ, ಮೈಥುನ=ಸ್ತ್ರೀಸಂಗ, ಭೇಷಜಂ=ಔಷಧ, ತಪಃ=ತಪಸ್ಸು, ದಾನ= ಕೊಡುವಿಕೆ, ಅಪಮಾನ=ಅವಮಾನ, ನವ=ಈ ಒಂಭತ್ತು, ಯತ್ನತಃ =ಪ್ರಯತ್ನದಿಂದ, ಗೋಪ್ಯಾನಿ=ಮರೆಮಾಚತಕ್ಕುವು.

ತಾ॥ ಆಯುಸ್ಸು, ಹಣ, ಮನೆಯ ಒಡಕು, ಮಂತ್ರ, ಸ್ತ್ರೀಸಹವಾಸ, ಔಷಧ, ತಪಸ್ಸು, ದಾನ, ಅವಮಾನ ಈ ಒಂಭತ್ತನ್ನು ಪ್ರಯತ್ನಪಟ್ಟು ಮುಚ್ಚಿಡಬೇಕು.

೨೮. अत्यन्तविमुखे दैवे व्यर्थे यत्ने च पौरुषे ।
मनस्विनो दरिद्रस्य वनादन्यत्कुतः सुखम् ॥ १३० ॥

೨೯. अन्यच्च ।
मनस्वी म्रियते कामं कार्पण्यं न तु गच्छति ।
अपि निर्वाणमायाति नानलो याति शीतताम् ॥ १३१ ॥

೩೦. किं च ।
कुसुमस्तबकस्येव द्वे वृत्ती तु मनस्विनः ।
सर्वेषां मूर्ध्नि वा तिष्ठेद्विशीर्येत वनेऽथ वा ॥ १३२ ॥

---

೨೮. ಅ॥ ದೈವೇ = ವಿಧಿಯು, ಅತ್ಯಂತವಿಮುಖೇ = ಹೆಚ್ಚುವಿರುದ್ಧವಾಗಿರಲು, ಪೌರುಷೇ ಯತ್ನೇ ಚ = ಮನುಷ್ಯ ಪ್ರಯತ್ನವೂ, ವ್ಯರ್ಥೇ = ನಿಷ್ಫಲವಾಗಲು, ದರಿದ್ರಸ್ಯ = ಬಡವನಾದ, ಮನಸ್ವಿನಃ = ಸ್ಥಿರಮನಸ್ಸಿನವನಿಗೆ, ವನಾತ್ = ಕಾಡಿಗಿಂತ, ಅನ್ಯತ್ = ಬೇರೆ, ಸುಖಂ = ಸೌಖ್ಯವು, ಕುತಃ = ಎಲ್ಲಿಂದ.

ತಾ॥ ಅದೃಷ್ಟವು ಅತ್ಯಂತವಿರುದ್ಧವಾಗಿರಲು, ಮನುಷ್ಯಯತ್ನವು ವ್ಯರ್ಥವಾಗಲು ಸ್ಥಿರಮನಸ್ಸಿನ ಮಾನವನು ಕಾಡನ್ನು ಸೇರಿದರೇನೇ ಸೌಖ್ಯವನ್ನು ಪಡೆಯುವನು.

೨೯. ಅ॥ ಮನಸ್ವೀ = ಸ್ಥಿರವಾದ ಮನಸ್ಸುಳ್ಳವನು, ಕಾಮಂ ಮ್ರಿಯತೇ = ಸಾಯುವನು. ತು = ಆದರೆ, ಕಾರ್ಪಣ್ಯಂ = ಬಡತನವು, ನ ತು ಗಚ್ಛತಿ = ಹೋಗುವುದಿಲ್ಲ. ಅನಲಃ = ಬೆಂಕಿಯು, ನಿರ್ವಾಣಂ ಅಪಿ ಆಯಾತಿ = ಆರಿಹೋಗುತ್ತದೆ. ಶೀತತಾಂ = ತನುವನ್ನು, ನ ಯಾತಿ = ಹೊಂದುವುದಿಲ್ಲ.

ತಾ॥ ಬೆಂಕಿಯು ಆರಿಹೋದರೂ ತಣ್ಣಗಾಗುವುದಿಲ್ಲ. ಅದರಂತೆ ಸ್ಥಿರಮನಸ್ಸಿನ ಬಡವನು ಸತ್ತರೂ ಅವನ ಬಡತನವು ಹೋಗುವುದಿಲ್ಲ.

೩೦. ಅ॥ ಮನಸ್ವಿನಃ = ದೃಢವಾದ ಮನಸ್ಸುಳ್ಳವನ, ವೃತ್ತೀ ತು =

೩೧. यच्चात्रैव याच्ञया जीवनं तदतीव गर्हितम् । यतः ।

೩೨. वरं विभवहीनेन प्राणैस्सन्तर्पितोऽनलः ।
नोपचारपरिभ्रष्टः कृपणः प्रार्थितो जनः ॥ १३३ ॥

---

ನಡತೆಯಾದರೊ, ಕುಸುಮಸ್ತಬಕಸ್ಯ ಇವ = ಹೂವಿನ ಗೊಂಚಲಂತೆ, ಸರ್ವೇಷಾಂ = ಎಲ್ಲರ, ಮೂರ್ಧ್ನಿ ವಾ ತಿಷ್ಠೇತ್ = ತಲೆಯಮೇಲಾದರೂ ಇದ್ದೀತು. ಅಥವಾ, ವನೇ = ಕಾಡಿನಲ್ಲಿ, ವಿಶೀರ್ಯೇತ = ಒಣಗಿಹೋದೀತು.

ತಾ॥ ಹೂವಿನ ಗೊಂಚಲನ್ನು ಜನರು ನೋಡಿದರೆ ಅದು ಸುವಾಸನೆಯಾಗಿದ್ದರೆ ಎಲ್ಲರೂ ಮುಡಿದುಕೊಳ್ಳುವರು. ಹಾಗಿಲ್ಲದಿದ್ದರೆ ಅದು ಕಾಡಿನಲ್ಲಿ ವ್ಯರ್ಥವಾಗಿ ಒಣಗಿಹೋಗುವುದು. ಹಾಗೆಯೇ ದೃಢಚಿತ್ತನು ಒಳ್ಳೆ ನಡೆತೆಯುಳ್ಳವನಾಗಿದ್ದರೆ ಅವನನ್ನು ಎಲ್ಲರೂ ಹೊಗಳುವರು. ದುಷ್ಟನಾಗಿದ್ದರೆ ಅವನನ್ನು ಯಾರೂ ಮಾತಾಡಿಸುವುದಿಲ್ಲ.

೩೧. ಅ॥ ಅತ್ರೈವ = ಇಲ್ಲಿಯೇ, ಯಾಚ್ಞಯಾ = ಬೇಡುವುದರಿಂದ, ಜೀವನಂ ಯತ್ = ಜೀವನವೆಂಬುದು ಯಾವುದೊ, ತತ್ = ಅದು, ಅತೀವ = ಅತ್ಯಂತ, ಗರ್ಹಿತಂ = ನಿಂದಿತವಾದುದು ಯತಃ,

೩೨. ಅ॥ ವಿಭವಹೀನೇನ = ಐಶ್ವರ್ಯವಿಲ್ಲದ ಬಡವನಿಂದ, ಪ್ರಾಣೈಃ = ಪ್ರಾಣದಿಂದ, ಸಂತರ್ಪಿತಃ = ತೃಪ್ತಿಗೊಳಿಸಲ್ಪಟ್ಟ, ಅನಲಃ = ಬೆಂಕಿಯು, ವರಂ = ಶ್ರೇಷ್ಠವಾದುದು. ಉಪಚಾರಪರಿಭ್ರಷ್ಟಃ = ಉಪಚಾರವಿಲ್ಲದ, ಪ್ರಾರ್ಥಿತಃ = ಬೇಡಲ್ಪಟ್ಟ, ಕೃಪಣಃ = ಜಿಪುಣನಾದ, ಜನಃ = ಮನುಷ್ಯನು, ನ ವರಂ = ಶ್ರೇಷ್ಠನಲ್ಲ.

ತಾ॥ ಬಡವನು ಹಣಕ್ಕಾಗಿ ಜಿಪುಣನನ್ನು ಬೇಡಿ ಪ್ರತಿಫಲವನ್ನು ಪಡೆಯದೆ ಧಿಕ್ಕಾರವನ್ನು ಹೊಂದುವುದಕ್ಕಿಂತ ಬೆಂಕಿಯಲ್ಲಿ ಬಿದ್ದು ಪ್ರಾಣಬಿಡುವುದೇ ಲೇಸು.

೩೩. दारिद्र्याद् ह्रियमेति ह्रीपरिगतः सत्त्वात्परिभ्रश्यते
निःसत्त्वः परिभूयते परिभवान्निर्वेदमापद्यते ।
निर्विण्णः शुचमेति शोकनिहतो बुद्ध्या परित्यज्यते
निर्बुद्धिः क्षयमेत्यहो निधनता सर्वापदामास्पदम् ॥

೩೪. किं च ।
वरं मौनं कार्यं न च वचनमुक्तं यदनृतं
वरं क्लैब्यं पुंसां न च परकलत्राभिगमनम् ।

---

೩೩. ಅ॥ ದಾರಿದ್ರ್ಯಾತ್=ಬಡತನದಿಂದ, ಹ್ರಿಯಂ=ನಾಚಿಕೆಯನ್ನು, ಏತಿ=ಹೊಂದುತ್ತಾನೆ. ಹ್ರೀಪರಿಗತಃ=ನಾಚಿಕೆಗೊಂಡವನಾಗಿ, ಸತ್ತ್ವಾತ್ =ಬಲದಿಂದ, ಪರಿಭ್ರಶ್ಯತೇ=ಬಿಡಲ್ಪಡುತ್ತಾನೆ. ನಿಸ್ಸತ್ತ್ವಃ=ಬಲವಿಲ್ಲದವನು, ಪರಿಭೂಯತೇ=ತಿರಸ್ಕರಿಸಲ್ಪಡುತ್ತಾನೆ. ಪರಿಭವಾತ್=ಅವಮಾನದಿಂದ,ನಿರ್ವೇದಂ=ವೈರಾಗ್ಯವನ್ನು, ಆಪದ್ಯತೇ=ಹೊಂದುತ್ತಾನೆ. ನಿರ್ವಿಣ್ಣಃ =ವಿರಕ್ತನಾಗಿ, ಶುಚಂ ಏತಿ=ದುಃಖಗೊಳ್ಳುತ್ತಾನೆ. ಶೋಕನಿಹತಃ=ದುಃಖ ಪೀಡಿತನಾಗಿ, ಬುದ್ಧ್ಯಾ ಪರಿತ್ಯಜ್ಯತೇ=ಬುದ್ಧಿಯಿಂದ ಬಿಡಲ್ಪಡುತ್ತಾನೆ. ನಿರ್ಬುದ್ಧಿಃ=ಬುದ್ಧಿಯಿಲ್ಲದವನು,ಕ್ಷಯಂ ಏತಿ=ನಾಶವಾಗುತ್ತಾನೆ. ನಿಧನತಾ =ಬಡತನವು, ಸರ್ವಾಪದಾಂ=ಎಲ್ಲ ಆಪತ್ತುಗಳಿಗೆ,ಆಸ್ಪದಂ=ಆಶ್ರಯವು, ಅಹೋ=ಆಶ್ಚರ್ಯ.

ತಾ॥ ಮನುಷ್ಯನು ಬಡತನದಿಂದ ಲಜ್ಜೆಗೊಳ್ಳುತ್ತಾನೆ. ನಾಚಿಕೆಗೊಂಡವನಾಗಿ ಬಲವಿಲ್ಲದವನಾಗುತ್ತಾನೆ.ಬಲವಿಲ್ಲದವನಾಗಿ ಅವಮಾನಕ್ಕೀಡಾಗುವನು. ಅವಮಾನದಿಂದ ವಿರಕ್ತನಾಗುವನು. ವಿರಕ್ತನಾಗಿ ದುಃಖಗೊಳ್ಳುವನು. ದುಃಖದಿಂದ ಮೂಢನಾಗುವನು. ಮೂಢನಾಗಿ ಸಾಯುವನು. ಹೀಗೆ ಬಡತನವು ಸಕಲ ಆಪತ್ತುಗಳಿಗೆ ಆಶ್ರಯವು.

೩೪. ಅ॥ ಮೌನಂ ಕಾರ್ಯಂ=ಮಾತಾಡದೆ ಕೆಲಸ ಮಾಡುವುದು, ವರಂ =ಶ್ರೇಷ್ಠವಾದುದು. ಉಕ್ತಂ=ಹೇಳಲ್ಪಟ್ಟ, ಅನೃತಂ ವಚನಂ ಯತ್=

वरं प्राणत्यागो न च पिशुनवाक्येष्वभिरुचि-
वरं भिक्षाशित्वं न च परधनास्वादनसुखम् ॥१३५॥

೩೫. वरं शून्या शाला न च खलु वरो दुष्टवृषभो
वरं वेश्या पत्नी न पुनरविनीता कुलवधूः ।
वरं वासोऽरण्ये न पुनरविवेकाधिपपुरे
वरं प्राणत्यागो न पुनरधमानामुपगमः ॥ १३६ ॥

---

ಸುಳ್ಳುಮಾತು ಯಾವುದೋ ಅದು, ನ ಚ ವರಂ = ಶ್ರೇಷ್ಠವಲ್ಲ, ಪುಂಸಾಂ= ಗಂಡಸರಿಗೆ, ಕ್ಲೈಬ್ಯಂ = ನಪುಂಸಕತ್ವವು, ವರಂ = ಶ್ರೇಷ್ಠವಾದುದು. ಪರ-ಕಲತ್ರಾಭಿಗಮನಂ = ಇತರರ ಹೆಂಡತಿಯರ ಸಂಗವು, ನ ಚ = ಶ್ರೇಷ್ಠವಲ್ಲ. ಪ್ರಾಣತ್ಯಾಗಃ = ಪ್ರಾಣಬಿಡುವುದು, ವರಂ = ಶ್ರೇಷ್ಠವಾದುದು. ಪಿಶುನ-ವಾಕ್ಯೇಷು = ಚಾಡಿ ಹೇಳುವವರ ಮಾತುಗಳಲ್ಲಿ, ಅಭಿರುಚಿಃ = ಅಭಿಲಾಷೆಯು, ನ ಚ. ಭಿಕ್ಷಾಶಿತ್ವಂ = ಭಿಕ್ಷೆ ಬೇಡಿ ಊಟಮಾಡುವುದು, ವರಂ. ಪರಧನ= ಇನ್ನೊಬ್ಬರ ಹಣದ, ಆಸ್ವಾದನಸುಖಂ = ಅನುಭವದ ಸೌಖ್ಯವು, ನ ಚ= ಶ್ರೇಷ್ಠವಲ್ಲ.

ತಾ॥ ಸುಳ್ಳನ್ನು ಹೇಳುವುದಕ್ಕಿಂತ ಮಾತಾಡದೆ ಕೆಲಸ ಮಾಡುವುದು ಉತ್ತಮವು. ಪರರ ಹೆಂಡತಿಯರ ಸಹವಾಸ ಮಾಡುವುದಕ್ಕಿಂತ ನಪುಂಸಕ ನಾಗಿರುವುದೇ ಲೇಸು. ಚಾಡಿ ಹೇಳುವವರ ಮಾತನ್ನು ಕೇಳುವುದಕ್ಕಿಂತ ಸಾಯುವುದೇ ಲೇಸು. ಇನ್ನೊಬ್ಬರ ಹಣದಿಂದ ಜೀವಿಸುವುದಕ್ಕಿಂತ ಭಿಕ್ಷಾ ಟನೆ ಮಾಡಿ ಜೀವಿಸುವುದೇ ಲೇಸು.

೩೫. ಅ॥ ಶೂನ್ಯಾ ಶಾಲಾ = ಬರಿ ಕೊಟ್ಟಿಗೆಯು, ವರಂ = ಶ್ರೇಷ್ಠ ವಾದುದು ದುಷ್ಟವೃಷಭಃ = ಕೆಟ್ಟ ಎತ್ತು, ನ ಚ ಖಲು ವರಃ = ಉತ್ತಮ ವಲ್ಲ. ವೇಶ್ಯಾ ಪತ್ನೀ = ಸೂಳೆಯಾದ ಹೆಂಡತಿಯು, ವರಂ. ಅವಿನೀತಾ= ವಿಧೇಯಳಲ್ಲದ, ಕುಲವಧೂಃ = ಕುಲಾಂಗನೆಯು, ನ ಪುನಃ ವರಂ = ಉತ್ತಮಳಲ್ಲ. ಅರಣ್ಯೇ = ಕಾಡಿನಲ್ಲಿ, ವಾಸಃ = ವಾಸಮಾಡುವುದು, ವರಂ= ಉತ್ತಮ. ಅವಿವೇಕಾಧಿಪಪುರೇ = ವಿವೇಕವಿಲ್ಲದ ರಾಜನ ಪಟ್ಟಣದಲ್ಲಿ, ನ

३१. अपि च ।

**सेवेव मानमखिलं ज्योत्स्नेव तमो जरेव लावण्यम् ।**
**हरिहरकथेव दुरितं गुणशतमप्यर्थिता हरति' ॥ १३७ ॥**

३२. इति विमृश्य 'तत्किमहं परपिण्डेनात्मानं पोषयामि । कष्टं भोः तदपि द्वितीयं मृत्युद्वारम् । यतः ।

---

ಪುನಃ. ಪ್ರಾಣತ್ಯಾಗಃ=ಸಾಯುವುದು, ವರಂ. ಅಧಮಾನಾಂ ಉಪಗಮಃ= ನೀಚರ ಸಹವಾಸವು, ನ ಪುನಃ=ಶ್ರೇಷ್ಠವಲ್ಲ.

ತಾ॥ ಕೊಟ್ಟಿಗೆಯಲ್ಲಿ ಕೆಟ್ಟ ಎತ್ತು ಇರುವುದಕ್ಕಿಂತ ಕೊಟ್ಟಿಗೆಯು ಬರಿದಾಗಿರುವುದೇ ಲೇಸು. ವಿಧೇಯಳಲ್ಲದ ಸತ್ಕುಲದಲ್ಲಿ ಹುಟ್ಟಿದವಳಿಗಿಂತ ಸೂಳೆಯು ಹೆಂಡತಿಯಾಗಿರುವುದೇ ಲೇಸು. ಅವಿವೇಕಿಯಾದ ರಾಜನ ಪಟ್ಟಣದಲ್ಲಿ ವಾಸಿಸುವುದಕ್ಕಿಂತ ಕಾಡಿನಲ್ಲಿ ವಾಸಮಾಡುವುದೇ ಲೇಸು. ನೀಚಜನರ ಸಹವಾಸಮಾಡುವುದಕ್ಕಿಂತ ಸಾಯುವುದೇ ಲೇಸು.

೩೧. ಅ॥ ಅಖಿಲಂ=ಎಲ್ಲ, ಮಾನಂ=ಮಾನವನ್ನು, ಸೇವಾ ಇವ= ಸೇವೆಯಂತೆಯೂ, ತಮಃ=ಕತ್ತಲೆಯನ್ನು, ಜ್ಯೋತ್ಸ್ನಾ ಇವ=ಬೆಳದಿಂಗಳಂತೆಯೂ, ಲಾವಣ್ಯಂ=ಸೌಂದರ್ಯವನ್ನು, ಜರಾ ಇವ=ಮುಪ್ಪಿನಂತೆಯೂ, ದುರಿತಂ=ಪಾಪವನ್ನು, ಹರಿಹರಕಥಾ ಇವ=ವಿಷ್ಣು ಮತ್ತು ಶಿವರ ಚರಿತ್ರೆಯಂತೆಯೂ, ಅರ್ಥಿತಾ=ಬೇಡಿಕೆಯು, ಗುಣಶತಂ ಅಪಿ=ಅನೇಕ ಗುಣಗಳನ್ನೂ, ಹರತಿ=ಅಪಹರಿಸುತ್ತದೆ.

ತಾ॥ ಇನ್ನೊಬ್ಬರ ಸೇವೆ ಮಾಡುವುದರಿಂದ ಮಾನವೆಲ್ಲ ಹೋಗುವುದು. ಬೆಳದಿಂಗಳು ಕತ್ತಲೆಯನ್ನು ನಿವಾರಿಸುವುದು. ಮುಪ್ಪು ಸೌಂದರ್ಯವನ್ನು ಹಾಳುಮಾಡುವುದು. ವಿಷ್ಣು ಶಿವರ ಕಥೆಯು ಪಾಪವನ್ನು ಪರಿಹರಿಸುವುದು. ಅದರಂತೆ ಇನ್ನೊಬ್ಬರನ್ನು ಬೇಡುವುದರಿಂದ ಗುಣಗಳೆಲ್ಲ ಹಾಳಾಗುವುವು.

೩೨. ಅ॥ ಇತಿ=ಹೀಗೆಂದು, ವಿಮೃಶ್ಯ=ವಿಚಾರಮಾಡಿ, ತತ್=ಆದ್ದ

३८. पल्लवग्राहि पाण्डित्यं क्रयक्रीतं च मैथुनम् ।
भोजनं च पराधीनं तिस्रः पुंसां विडम्बनाः ॥ १३८ ॥

३९. रोगी चिरप्रवासी परान्नभोजी परावसथशायी ।
यज्जीवति तन्मरणं यन्मरणं सोऽस्य विश्रामः' ॥ १३९ ॥

---

ರಿಂದ, ಅಹಂ = ನಾನು, ಕಿಂ = ಏತಕ್ಕೆ, ಪರಪಿಂಡೇನ = ಇನ್ನೊಬ್ಬರ ಅನ್ನ ದಿಂದ, ಆತ್ಮಾನಂ = ನನ್ನನ್ನು, ಪೋಷಯಾಮಿ = ಪೋಷಿಸಿಕೊಳ್ಳುವೆನು. ಕಷ್ಟಂ ಭೋಃ = ಕಷ್ಟ. ತದಪಿ = ಅದೂ, ದ್ವಿತೀಯಂ = ಎರಡನೆ, ಮೃತ್ಯು ದ್ವಾರಂ = ಸಾವಿನ ಬಾಗಿಲು, ಯತಃ,

೩೮. ಅ॥ ಪಲ್ಲವಗ್ರಾಹಿ = ಅಲ್ಪವಾದ, ಪಾಂಡಿತ್ಯಂ = ವಿದ್ವತ್ತು, ಕ್ರಯ ಕ್ರೀತಂ = ಹಣದಿಂದ ಕೊಂಡುಕೊಂಡ, ಮೈಥುನಂ = ಸ್ತ್ರೀಸಂಗವು, ಪರಾ ಧೀನಂ = ಇನ್ನೊಬ್ಬರ ಅಧೀನವಾದ, ಭೋಜನಂ ಚ = ಊಟವೂ, ತಿಸ್ರಃ = ಈ ಮೂರು, ಪುಂಸಾಂ = ಮನುಷ್ಯರಿಗೆ, ವಿಡಂಬನಾಃ = ಅಣಕಿಸು ವಿಕೆಯು.

ತಾ॥ ಅಲ್ಪಜ್ಞಾನ, ಹಣಕೊಟ್ಟು ಸಂಪಾದಿಸಿದ ಸ್ತ್ರೀಸಂಗ, ಇನ್ನೊಬ್ಬರ ಅಧೀನದಲ್ಲಿ ಊಟಮಾಡಿಕೊಂಡಿರುವಿಕೆ ಈ ಮೂರು ನಿಜವಾದ ಸೌಖ್ಯ ವನ್ನುಂಟು ಮಾಡತಕ್ಕವಲ್ಲ.

೩೯. ಅ॥ ರೋಗೀ = ಕಾಯಿಲೆಯವನು, ಚಿರಪ್ರವಾಸೀ = ಬಹಳಕಾಲ ದೇಶಾಂತರದಲ್ಲಿ ಸಂಚರಿಸುವವನು, ಪರಾನ್ನಭೋಜೀ = ಮತ್ತೊಬ್ಬರ ಅನ್ನವನ್ನು ತಿಂದುಕೊಂಡಿರುವವನು, ಪರಾವಸಥ = ಇನ್ನೊಬ್ಬರ ಮನೆ ಯಲ್ಲಿ, ಶಾಯೀ = ಮಲಗುವವನು, ಜೀವತಿ (ಇತಿ) ಯತ್ = ಬದುಕಿ ಕೊಂಡಿರುವನೆಂಬುದು ಯಾವುದೊ, ತತ್ = ಅದು, ಮರಣಂ = ಸಾವು. ಮರಣಂ ಯತ್ = ನಿಜವಾದ ಸಾವೆಂಬುದು ಯಾವುದೊ, ಸಃ = ಅದು, ಅಸ್ಯ = ಇವನಿಗೆ, ವಿಶ್ರಾಮಃ = ವಿಶ್ರಾಂತಿ.

ತಾ॥ ಕಾಯಿಲೆಯವನು, ಬಹಳಕಾಲ ದೇಶಾಂತರಗಳಲ್ಲಿ ಸಂಚರಿಸುತ್ತಿರು

४०. इत्यालोच्यापि लोभात्पुनरप्यर्थं ग्रहीतुं ग्रहं अकरवम् । तथा चोक्तम् ।

४०. **लोभेन बुद्धिश्चलति लोभो जनयते तृषाम् ।**
**तृषार्तो दुःखमाप्नोति परत्रेह च मानवः ॥ १४० ॥**

४१. ततोऽहं मन्दं मन्दमुपसर्पंस्तेन वीणाकर्णेन जर्जरवंशखण्डेन ताडितश्चाचिन्तयम् ।

---

ವವನು, ಪರರ ಅನ್ನವನ್ನು ಊಟಮಾಡಿಕೊಂಡಿರುವವನು, ಇನ್ನೊಬ್ಬರ ಮನೆಯಲ್ಲಿ ಮಲಗುವವನು ಇವರು ಬದುಕಿದ್ದರೂ ಸತ್ತಂತೆಯೇ. ಇವರಿಗೆ ಸತ್ತಾಗಲೇ ವಿಶ್ರಾಂತಿ.

೪೦. ಅ॥ ಇತಿ=ಹೀಗೆ, ಆಲೋಚ್ಯ ಅಪಿ=ಚಿಂತಿಸಿಯೂ, ಲೋಭಾತ್ =ಆಶೆಯಿಂದ, ಪುನಃ ಅಪಿ=ಮತ್ತೂ, ಅರ್ಥಂ=ಹಣವನ್ನು, ಗ್ರಹೀತುಂ =ತೆಗೆದುಕೊಳ್ಳುವುದಕ್ಕೆ, ಗ್ರಹಂ=ಹಠವನ್ನು, ಅಕರವಂ=ಮಾಡಿದೆನು.

೪೧. ಅ॥ ಲೋಭೇನ=ಅತ್ಯಾಶೆಯಿಂದ, ಬುದ್ಧಿಃ=ಬುದ್ಧಿಯು, ಚಲತಿ = ಚಂಚಲವಾಗುತ್ತದೆ. ಲೋಭಃ = ಅತ್ಯಾಶೆಯು, ತೃಷಾಂ = ಇನ್ನೊಂದನ್ನು ಹೊಂದುವ ಆಶೆಯನ್ನು, ಜನಯತೇ=ಉಂಟುಮಾಡುತ್ತದೆ. ತೃಷಾರ್ತಃ=ಆಶೆಯಿಂದ ಪೀಡಿತನಾದ, ಮಾನವಃ=ಮನುಷ್ಯನು, ಪರತ್ರ =ಪರಲೋಕದಲ್ಲಿ, ಚ=ಮತ್ತು, ಇಹ=ಈ ಲೋಕದಲ್ಲಿ, ದುಃಖಂ= ದುಃಖವನ್ನು, ಆಪ್ನೋತಿ=ಹೊಂದುತ್ತಾನೆ.

ತಾ॥ ಅತ್ಯಾಶೆಯಿಂದ ಬುದ್ಧಿಯು ಚಂಚಲವಾಗುವುದು ಆ ಅತ್ಯಾಶೆ ಯಿಂದಲೇ ಇನ್ನೊಂದನ್ನು ಪಡೆಯಬೇಕೆಂಬ ಆಶೆಯುಂಟಾಗುವುದು. ಆಶೆ ಯಿಂದ ಪೀಡಿತನಾದ ಮನುಷ್ಯನು ಈ ಲೋಕದಲ್ಲಿಯೂ, ಪರಲೋಕ ದಲ್ಲಿಯೂ ದುಃಖಕ್ಕೀಡಾಗುವನು

೪೨. ಅ॥ ತತಃ=ಬಳಿಕ, ಅಹಂ=ನಾನು, ಮಂದಂ ಮಂದಂ=ಮೆಲ್ಲ

೪೩. 'धनलुब्धो ह्यसन्तुष्टोऽनियतात्माजितेन्द्रियः ।
सर्वा एवापदस्तस्य यस्य तुष्टं न मानसम् ॥ १४१ ॥

೪೪. तथा च ।
सर्वाः सम्पत्तयस्तस्य सन्तुष्टं यस्य मानसम् ।
उपानद्गूढपादस्य ननु चर्मावृतेव भूः ॥ १४२ ॥

---

ಮೆಲ್ಲನೆ, ಉಪಸರ್ಪನ್=ಸಮೀಪಿಸುತ್ತ, ತೇನ=ಆ, ವೀಣಾಕರ್ಣೇನ=ವೀಣಾಕರ್ಣನಿಂದ, ಜರ್ಜರವಂಶಖಂಡೇನ=ಒಡೆದ ಬಿದಿರಿನ ತುಂಡಿನಿಂದ, ತಾಡಿತಃ ಚ=ಹೊಡೆಯಲ್ಪಟ್ಟವನಾಗಿ, ಅಚಿಂತಯಂ=ಆಲೋಚಿಸಿದೆನು.

೪೩. ಅ॥ ಧನಲುಬ್ಧಃ=ಹಣದಲ್ಲಿ ಆಶೆಯುಳ್ಳವನು, ಅಸಂತುಷ್ಟಃ=ತೃಪ್ತಿಯಿಲ್ಲದವನೂ, ಅನಿಯತಾತ್ಮಾ=ಸ್ತಿಮಿತವಾದ ಮನಸ್ಸಿಲ್ಲದವನೂ, ಅಜಿತೇಂದ್ರಿಯಃ=ಇಂದ್ರಿಯ ನಿಗ್ರಹವಿಲ್ಲದವನೂ ಆಗುವನು. ಯಸ್ಯ=ಯಾವನ, ಮಾನಸಂ=ಮನಸ್ಸು, ನ ತುಷ್ಟಂ = ಸಂತೋಷಗೊಂಡಿರುವುದಿಲ್ಲವೊ ; ತಸ್ಯ ಏವ=ಅವನಿಗೇವೇ, ಸರ್ವಾಃ=ಎಲ್ಲ, ಆಪದಃ=ಕಷ್ಟಗಳು (ಬರುವುವು).

ತಾ॥ ಹಣದಲ್ಲಿ ಅತ್ಯಾಶೆಯುಳ್ಳವನು ಸಂತೋಷವಿಲ್ಲದವನೂ, ಚಪಲ ಬುದ್ಧಿಯುಳ್ಳವನೂ, ಇಂದ್ರಿಯ ನಿಗ್ರಹವಿಲ್ಲದವನೂ ಆಗುವನು. ಸಂತೋಷ ವಿಲ್ಲದ ಮನಸ್ಸುಳ್ಳವನಿಗೆ ಎಲ್ಲಾ ಆಪತ್ತುಗಳೂ ಒದಗುವುವು.

೪೪. ಅ॥ ಯಸ್ಯ=ಯಾವನ; ಮಾನಸಂ=ಮನಸ್ಸು, ಸಂತುಷ್ಟಂ=ಸಂತೋಷಗೊಂಡಿರುವುದೊ ; ತಸ್ಯ = ಅವನಿಗೆ, ಸರ್ವಾಃ = ಎಲ್ಲವೂ, ಸಂಪತ್ತಯಃ=ಐಶ್ವರ್ಯಗಳು. ಉಪಾನತ್=ಪಾದರಕ್ಷೆಯಿಂದ, ಗೂಢ=ಮುಚ್ಚಿರುವ, ಪಾದಸ್ಯ=ಕಾಲುಳ್ಳವನಿಗೆ, ಭೂಃ=ಭೂಮಿಯು, ಚರ್ಮಾವೃತಾ ಇವ=ಚರ್ಮದಿಂದ ಮುಚ್ಚಿರುವಂತಿರುವುದು.

ತಾ॥ ಕಾಲಿಗೆ ಪಾದರಕ್ಷೆಯನ್ನು ಹಾಕಿಕೊಂಡವನಿಗೆ ಭೂಮಿಯು ಕಲ್ಲು ಮುಳ್ಳುಗಳಿಂದ ಕೂಡಿದ್ದರೂ ಚರ್ಮದ ಹೊದ್ದಿಕೆಯುಳ್ಳಂತೆ ತೋರುವುದು.

೪೫. अपरं च ।

सन्तोषामृततृप्तानां यत्सुखं शान्तचेतसाम् ।
कुतस्तद्धनलुब्धानामितश्चेतश्च धावताम् ॥ १४३ ॥

೪೬. किं च ।

तेनाधीतं श्रुतं तेन तेन सर्वमनुष्ठितम् ।
येनाशाः पृष्ठतः कृत्वा नैराश्यमवलम्बितम् ॥ १४४ ॥

---

ಹಾಗೆಯೇ ಸಂತೋಷಗೊಂಡ ಮನಸ್ಸುಳ್ಳವನಿಗೆ ಎಲ್ಲವೂ ಸಂಪತ್ತಿನಂತೆಯೇ ತೋರುವವು.

೪೫. ಅ॥ ಸಂತೋಷಾಮೃತ = ಸಂತೋಷವೆಂಬ ಅಮೃತದಿಂದ, ತೃಪ್ತಾನಾಂ=ತೃಪ್ತಿಗೊಂಡ, ಶಾಂತಚೇತಸಾಂ = ಶಾಂತಮನಸ್ಸುಳ್ಳವರಿಗೆ, ಯತ್ ಸುಖಂ=ಯಾವ ಸೌಖ್ಯವೊ, ಧನಲುಬ್ಧಾನಾಂ= ಹಣದಲ್ಲಿ ಆಶೆಯುಳ್ಳ, ಇತಃ ಚ ಇತಃ ಚ=ಇಲ್ಲಿ ಅಲ್ಲಿ, ಧಾವತಾಂ=ಓಡುವವರಿಗೆ, ತತ್=ಆ ಸೌಖ್ಯವು, ಕುತಃ=ಎಲ್ಲಿಂದ.

ತಾ॥ ಸಂತೋಷವೆಂಬ ಅಮೃತದಿಂದ ತೃಪ್ತಿಗೊಂಡು ಶಾಂತಮನಸ್ಸುಳ್ಳ ಮನುಷ್ಯರಿಗೆ ಆಗುವ ಸುಖವು ಹಣದಲ್ಲಿ ಆಶೆಗೊಂಡು ಇಲ್ಲಿ ಅಲ್ಲಿ ಅಲೆದಾಡುವ ಮಾನವರಿಗಾಗುವುದಿಲ್ಲ.

೪೬. ಅ॥ ಯೇನ=ಯಾವನಿಂದ, ಆಶಾಃ=ಆಶೆಗಳನ್ನು, ಪೃಷ್ಠತಃ ಕೃತ್ವಾ=ಹಿಂದೆಮಾಡಿ, ನೈರಾಶ್ಯಂ=ಆಶೆಯಿಲ್ಲದಿರುವಿಕೆಯು, ಅವಲಂಬಿತಂ =ಆಶ್ರಯಿಸಲ್ಪಟ್ಟಿತೊ ; ತೇನ = ಅವನಿಂದ, ಅಧೀತಂ = ಅಧ್ಯಯನ ಮಾಡಲ್ಪಟ್ಟಿತು. ತೇನ=ಅವನಿಂದ, ಶ್ರುತಂ=ಶಾಸ್ತ್ರವು ಕೇಳಲ್ಪಟ್ಟಿತು. ತೇನ, ಸರ್ವಂ=ಎಲ್ಲವೂ, ಅನುಷ್ಠಿತಂ=ಮಾಡಲ್ಪಟ್ಟಿತು.

ತಾ॥ ಆಶೆಯನ್ನು ತ್ಯಜಿಸಿದ ಮಾತ್ರದಿಂದಲೇ ಮಾನವನು ಎಲ್ಲವನ್ನೂ ಓದಿದಂತೆಯೂ, ಕೇಳಿದಂತೆಯೂ, ಮಾಡಿದಂತೆಯೂ ಆಗುವನು. ಎಂದರೆ ಆಶೆಯು ಅತ್ಯಂತ ದುಷ್ಟವಾದುದು.

೪೭. अपि च ।

असेवितेश्वरद्वारमदृष्टविरहव्यथम् ।
अनुक्तक्लीबवचनं धन्यं कस्यापि जीवनम् ॥ १४५ ॥

೪೮. यतः ।

न योजनशतं दूरं बाध्यमानस्य तृष्णया ।
सन्तुष्टस्य करप्राप्तेऽप्यर्थे भवति नादरः ॥ १४६ ॥

---

೪೭. ಅ॥ ಅಸೇವಿತ=ಸೇವಿಸಲ್ಪಡದ, ಈಶ್ವರದ್ವಾರಂ = ಹಣಗಾರರ ಮನೆಯ ಬಾಗಿಲುಳ್ಳ, ಅದೃಷ್ಟ=ಕಾಣಲ್ಪಡದ, ವಿರಹವ್ಯಥಂ=ವಿಯೋಗದ ವ್ಯಥೆಯುಳ್ಳ, ಅನುಕ್ತ=ಹೇಳಲ್ಪಡದ, ಕ್ಲೀಬವಚನಂ=ಹೇಡಿಯ ಮಾತುಳ್ಳ, ಕಸ್ಯಾಪಿ=ಯಾವನೊ ಒಬ್ಬನ, ಜೀವಿತಂ=ಜೀವನವು, ಧನ್ಯಂ =ಪುಣ್ಯವುಳ್ಳುದು.

ತಾ॥ ತನ್ನ ಬದುಕಿನಲ್ಲಿ ಹಣಕ್ಕಾಗಿ ಹಣಗಾರರನ್ನು ಬೇಡಲು ಅವರ ಮನೆಯ ಬಾಗಿಲನ್ನು ಕಾಯದೆ ಇರುವ, ಅಗಲಿಕೆಯ ವ್ಯಥೆಯನ್ನೇ ಕಾಣದಿರುವ, ಹೇಡಿಯಂತೆ ಮಾತಾಡದೆ ಇರುವ ಮನುಷ್ಯನ ಜೀವನವು ಶ್ರೇಷ್ಠವಾದುದು.

೪೮. ಅ॥ ತೃಷ್ಣಯಾ=ಆಶೆಯಿಂದ, ಯೋಜನಶತಂ ದೂರಂ=ನೂರು ಯೋಜನ ದೂರದಷ್ಟು, ಬಾಧ್ಯಮಾನಸ್ಯ=ಪೀಡಿಸಲ್ಪಡುತ್ತಿರುವವನಿಗೆ, ನ= ಕೈಯನ್ನು ಸೇರಿದ ಹಣದಿಂದ ತೃಪ್ತಿಯಾಗುವುದಿಲ್ಲ. ಸಂತುಷ್ಟಸ್ಯ = ತೃಪ್ತಿಗೊಂಡವನಿಗೆ, ಕರಪ್ರಾಪ್ತೇ=ಕೈಯನ್ನು ಸೇರಿದ, ಅರ್ಥೇ ಅಪಿ= ಹಣದಲ್ಲಿಯೂ, ಆದರಃ=ಪ್ರೀತಿಯು, ನ ಭವತಿ=ಉಂಟಾಗುವುದಿಲ್ಲ.

ತಾ॥ ಆಶೆಯಿಂದ ಅತ್ಯಂತ ಪೀಡಿತನಾದವನಿಗೆ (ಅತ್ಯಾಶೆಯುಳ್ಳವನಿಗೆ) ಹಣವು ಕೈಯನ್ನು ಸೇರಿದರೂ ಅದರಿಂದ ತೃಪ್ತಿಯಾಗುವುದಿಲ್ಲ. ತೃಪ್ತಿಗೊಂಡವನಿಗೂ ಹಸ್ತಗತವಾದ ದ್ರವ್ಯದಲ್ಲಿ ಪ್ರೀತಿಯುಂಟಾಗುವುದಿಲ್ಲ.

೪೯. तदत्रावस्थोचितकार्यपरिच्छेदः श्रेयान् ।

೫೦. **को धर्मो भूतदया किं सौख्यमरोगिता जगति जन्तोः ।**
**कः स्नेहः सद्भावः किं पाण्डित्यं परिच्छेदः ॥ १४७ ॥**

೫೧. तथा च ।

**परिच्छेदो हि पाण्डित्यं यदापन्ना विपत्तयः ।**
**अपरिच्छेदकर्तॄणां विपदः स्युः पदे पदे ॥ १४८ ॥**

---

೪೯. ಅ॥ ತತ್=ಆದ್ದರಿಂದ, ಅತ್ರ=ಇಲ್ಲಿ, ಅವಸ್ಥೋಚಿತ=ಸ್ಥಿತಿಗೆ ಯೋಗ್ಯವಾದ, ಕಾರ್ಯಪರಿಚ್ಛೇದಃ=ಕೆಲಸದ ನಿರ್ಣಯವು, ಶ್ರೇಯಾನ್=ಶ್ರೇಷ್ಠವಾದುದು. (ಆದ್ದರಿಂದ ನಮ್ಮ ಸ್ಥಿತಿಗೆ ತಕ್ಕಂತೆ ಕಾರ್ಯವನ್ನು ಮಾಡುವುದನ್ನು ನಿರ್ಣಯಿಸಿಕೊಳ್ಳುವುದು ಉತ್ತಮವಾದುದು).

೫೦. ಅ॥ ಧರ್ಮಃ=ಧರ್ಮವು, ಕಃ=ಯಾವುದು ? ಭೂತದಯಾ=ಪ್ರಾಣಿಗಳಲ್ಲಿ ದಯೆಮಾಡುವುದು. ಜಂತೋಃ = ಪ್ರಾಣಿಗೆ, ಜಗತಿ=ಲೋಕದಲ್ಲಿ, ಸೌಖ್ಯಂ=ಸುಖವು, ಕಿಂ=ಯಾವುದು ? ಅರೋಗಿತಾ=ಕಾಯಿಲೆಯಿಲ್ಲದಿರುವುದು. ಸ್ನೇಹಃ = ಪ್ರೀತಿಯು, ಕಃ= ಯಾವುದು ? ಸದ್ಭಾವಃ=ಸಜ್ಜನತೆಯು. ಪಾಂಡಿತ್ಯಂ=ವೈದುಷ್ಯವು, ಕಿಂ=ಯಾವುದು ? ಪರಿಚ್ಛೇದಃ=ನಿರ್ಣಯವು.

ತಾ॥ ಪ್ರಪಂಚದಲ್ಲಿ ಮನುಷ್ಯನಿಗೆ ಪ್ರಾಣಿಗಳಲ್ಲಿ ದಯೆಮಾಡುವುದೇ ಧರ್ಮವು. ಕಾಯಿಲೆಯಿಲ್ಲದಿರುವುದೇ ಸೌಖ್ಯವು. ಸಜ್ಜನತ್ವವೇ ಸ್ನೇಹವು. ಕಾರ್ಯದಲ್ಲಿ ನಿಶ್ಚಯತೆಯಿರುವುದೇ ಪಾಂಡಿತ್ಯವು.

೫೧ ಅ॥ ಪರಿಚ್ಛೇದಃ=ಹೀಗೆಯೇ ಎಂಬ ನಿರ್ಣಯವೇ, ಪಾಂಡಿತ್ಯಂ ಹಿ =ವೈದುಷ್ಯವಷ್ಟೆ. ವಿಪತ್ತಯಃ=ಆಪತ್ತುಗಳು, ಯದಾಪನ್ನಾಃ=ಯಾವ ಪಾಂಡಿತ್ಯವನ್ನು ಆಶ್ರಯಿಸಿಕೊಂಡಿರುವುವು. ಅಪರಿಚ್ಛೇದಕರ್ತೄಣಾಂ=

೫೨. त्यजेदेकं कुलस्यार्थे ग्रामस्यार्थे कुलं त्यजेत् ।
ग्रामं जनपदस्यार्थे स्वात्मार्थे पृथिवीं त्यजेत् ॥ १४९ ॥

೫೩. अपरं च ।
पानीयं वा निरायासं स्वाद्वन्नं वा भयोत्तरम् ।
विचार्य खलु पश्यामि तत्सुखं यत्र निर्वृतिः' ॥ १५० ॥

---

= ನಿರ್ಣಯವನ್ನು ಮಾಡಿಕೊಳ್ಳದವರಿಗೆ, ಪದೇ ಪದೇ = ಪ್ರತಿ ಹೆಜ್ಜೆಯಲ್ಲಿಯೂ (ಆಗಾಗ), ವಿಪದಃ = ಆಪತ್ತುಗಳು, ಸ್ಯುಃ = ಉಂಟಾದಾವು.

ತಾ|| ನಿರ್ಣಯಿಸಿಕೊಳ್ಳುವುದೇ ಜಾಣತನ. ಅದನ್ನೇ ಆಪತ್ತುಗಳು ಹೊಂದಿಕೊಂಡಿರುವುವು. ಹಾಗೆ ನಿಶ್ಚಿತ ಮನಸ್ಸಿಲ್ಲದವರಿಗೆ ಆಗಾಗ ಕಷ್ಟಗಳು ಒದಗುವುವು.

೫೨. ಅ|| ಕುಲಸ್ಯ ಅರ್ಥೇ = ವಂಶಕ್ಕಾಗಿ, ಏಕಂ = ಒಬ್ಬನನ್ನು, ತ್ಯಜೇತ್ = ಬಿಡಬೇಕು. ಗ್ರಾಮಸ್ಯಾರ್ಥೇ = ಹಳ್ಳಿಗಾಗಿ, ಕುಲಂ = ವಂಶವನ್ನು, ತ್ಯಜೇತ್ = ಬಿಡಬೇಕು. ಜನಪದಸ್ಯಾರ್ಥೇ = ದೇಶಕ್ಕಾಗಿ, ಗ್ರಾಮಂ = ಹಳ್ಳಿಯನ್ನೂ, ಸ್ವಾತ್ಮಾರ್ಥೇ = ತನಗಾಗಿ, ಪೃಥಿವೀಂ = ಭೂಮಿಯನ್ನೂ, ತ್ಯಜೇತ್ = ಬಿಡಬೇಕು.

ತಾ|| ಒಬ್ಬನನ್ನು ಕಳೆದುಕೊಂಡರೆ ವಂಶವು ಉದ್ಧಾರವಾಗುವುದಾದರೆ ಆ ಒಬ್ಬನನ್ನು ಬಿಟ್ಟುಬಿಡಬೇಕು. ಕುಲವನ್ನು ತ್ಯಜಿಸಿದರೆ ಗ್ರಾಮವು ಉದ್ಧಾರವಾಗುವುದಾದರೆ ಕುಲವನ್ನು ಬಿಡಬೇಕು. ಗ್ರಾಮವನ್ನು ಬಿಟ್ಟರೆ ದೇಶವು ಉದ್ಧಾರವಾಗುವುದಾದರೆ ಗ್ರಾಮವನ್ನು ಬಿಡಬೇಕು. ಭೂಮಿಯನ್ನು ಬಿಟ್ಟರೆ ತಾನು ಉಳಿದುಕೊಳ್ಳುವುದಾದರೆ ಭೂಮಿಯನ್ನು ಬಿಡಬೇಕು.

೫೩. ಅ|| ನಿರಾಯಾಸಂ = ಆಯಾಸವಿಲ್ಲದ, ಪಾನೀಯಂ ವಾ = ನೀರನ್ನೇ ಆಗಲಿ, ಭಯೋತ್ತರಂ = ಮುಂದೆ ಭಯವನ್ನುಂಟು ಮಾಡುವ, ಸ್ವಾದ್ವನ್ನಂ ವಾ = ರುಚಿಯಾದ ಅನ್ನವನ್ನಾಗಲಿ, ವಿಚಾರ್ಯ = ಆಲೋಚಿಸಿ, ಪಶ್ಯಾಮಿ ಖಲು

೫೪. इत्यालोच्याहं निर्जनवनमागतः । यतः ।

೫೫. वरं वनं व्याघ्रगजेन्द्रसेवितं
द्रुमालयं पक्वफलाम्बुभोजनम् ।
तृणानि शय्या परिधानवल्कलं
न बन्धुमध्ये धनहीनजीवनम् ॥ १५१ ॥

---

=ನೋಡುವೆನು. ಯತ್ರ=ಎಲ್ಲಿ, ನಿರ್ವೃತಿಃ=ಶ್ರೇಯಸ್ಸುಂಟಾಗುವುದೋ, ತತ್=ಅದು, ಸುಖಂ=ಸೌಖ್ಯವು.

ತಾ॥ ಶ್ರೇಯಸ್ಸಾಗುವುದೇ ಸುಖವಾಗಿರುವುದರಿಂದ ನಾನು ಸುಖವಾಗಿ ಸಿಕ್ಕುವ ನೀರನ್ನಾಗಲಿ, ಆಪತ್ತಿಗೆ ಕಾರಣವಾದ ರುಚಿಕರ ಅನ್ನವನ್ನಾಗಲಿ ಚೆನ್ನಾಗಿ ಆಲೋಚಿಸಿಯೇ ಸ್ವೀಕರಿಸುವೆನು.

೫೪. ಅ॥ ಅಹಂ=ನಾನು, ಇತಿ ಆಲೋಚ್ಯ=ಹೀಗೆ ಚಿಂತಿಸಿ,: ನಿರ್ಜನ-ವನಂ=ಜನರಿಲ್ಲದ ಕಾಡಿಗೆ, ಆಗತಃ=ಬಂದೆನು. ಯತಃ=ಯಾವ ಕಾರಣದಿಂದ.

೫೫. ಅ॥ ವ್ಯಾಘ್ರ=ಹುಲಿ, ಗಜೇಂದ್ರ=ಶ್ರೇಷ್ಠವಾದ ಆನೆ ಇವುಗಳಿಂದ, ಸೇವಿತಂ=ಸೇವಿಸಲ್ಪಟ್ಟ, ವನಂ=ಕಾಡೇ, ವರಂ=ಉತ್ತಮವಾದುದು. ಪಕ್ವ=ಮಾಗಿದ, ಫಲ=ಹಣ್ಣು, ಅಂಬು=ನೀರು ಇವುಗಳ, ಭೋಜನಂ=ಊಟವುಳ್ಳ, ದ್ರುಮಾಲಯಂ=ಮರದ ಮನೆಯು, ವರಂ=ಶ್ರೇಷ್ಠವಾದುದು, ತೃಣಾನಿ=ಹುಲ್ಲಿನ ರೂಪವಾದ, ಶಯ್ಯಾ=ಹಾಸಿಗೆ, ಪರಿಧಾನವಲ್ಕಲಂ=ನಾರಿನ ಉಡಿಗೆ ಇವುಗಳು, ವರಂ. ಬಂಧುಮಧ್ಯೇ=ಬಂಧುಗಳ ನಡುವೆ, ಧನಹೀನಜೀವನಂ=ಹಣವಿಲ್ಲದ ಬದುಕು, ನ ವರಂ=ಶ್ರೇಷ್ಠವಲ್ಲ.

ತಾ॥ ಹುಲಿ, ಆನೆಗಳಿಂದ ಕೂಡಿದ ಕಾಡಿನ ಜೀವನವು ಉತ್ತಮವಾದುದು. ಮಾಗಿದ ಹಣ್ಣುಗಳು ನೀರು ಇವುಗಳೆ ಆಹಾರವಾಗುಳ್ಳ ಮರಗಳ ಮನೆಯಲ್ಲಿ ಜೀವಿಸುವುದೂ ಶ್ರೇಷ್ಠವಾದುದು. ಹುಲ್ಲಿನ ಹಾಸಿಗೆ, ನಾರುಡಿಗೆಗಳೂ

೫೭. ततोऽस्मत्पुण्योदयादनेन मित्रेणाहं स्नेहानुवृत्त्या अनुगृहीतः । अधुना च पुण्यपरम्परया भवदाश्रयः स्वर्ग एव मया प्राप्तः । यतः ।

೫೭. संसारविषवृक्षस्य द्वे एव रसवत्फले ।
काव्यामृतरसास्वादः सङ्गमः सुजनैः सह ॥ १५२ ॥

೫೮. मन्थर उवाच ।
'अर्थाः पादरजोपमा गिरिनदीवेगोपमं यौवनं
आयुष्यं जललोलबिन्दुचपलं फेनोपमं जीवितम् ।

---

ಉತ್ತಮವಾದುವು. ಬಂಧುಗಳ ನಡುವೆ ಹಣವಿಲ್ಲದ ಬಡತನದ ಜೀವನವು ಶ್ರೇಷ್ಠವಲ್ಲ.

೫೬. ಅ॥ ತತಃ=ತರುವಾಯ, ಅಸ್ಮತ್=ನನ್ನ, ಪುಣ್ಯೋದಯಾತ್ =ಪುಣ್ಯದ ಆವಿರ್ಭಾವದಿಂದ, ಅನೇನ ಮಿತ್ರೇಣ=ಈ ಸ್ನೇಹಿತನಿಂದ, ಅಹಂ=ನಾನು, ಸ್ನೇಹಾನುವೃತ್ತ್ಯಾ=ಸ್ನೇಹಾನುಸರಣೆಯಿಂದ, ಅನುಗೃಹೀತಃ=ಅನುಗ್ರಹ ಮಾಡಲ್ಪಟ್ಟಿನು ಅಧುನಾ ಚ=ಈಗ, ಪುಣ್ಯಪರಂಪರಯಾ=ಪುಣ್ಯದ ಸಮೂಹದಿಂದ, ಭವದಾಶ್ರಯಃ=ನಿನ್ನ ಆಶ್ರಯವೆಂಬ, ಸ್ವರ್ಗಃ ಏವ = ಸ್ವರ್ಗವೇ, ಮಯಾ=ನನ್ನಿಂದ, ಪ್ರಾಪ್ತಃ = ಹೊಂದಲ್ಪಟ್ಟಿತು. ಯತಃ=ಯಾವ ಕಾರಣದಿಂದ,

೫೭. ಅ॥ ಸಂಸಾರವಿಷವೃಕ್ಷಸ್ಯ=ಸಂಸಾರವೆಂಬ ವಿಷವೃಕ್ಷದ, ಕಾವ್ಯಾಮೃತರಸ = ಕಾವ್ಯದ ಅಮೃತರಸದ, ಆಸ್ವಾದಃ = ಅನುಭವಿಸುವಿಕೆ, ಸುಜನೈಃ ಸಹ=ಸಜ್ಜನರೊಡನೆ, ಸಂಗಮಃ=ಸೇರುವಿಕೆ, ದ್ವೇ ಏವ= ಎರಡೇ, ರಸವತ್ಫಲೇ=ರಸವುಳ್ಳ ಹಣ್ಣುಗಳು.

ತಾ॥ ಸಂಸಾರವೆಂಬುದೊಂದು ವಿಷದ ಮರ. ಅದರ ಎರಡು ರಸವುಳ್ಳ ಹಣ್ಣುಗಳಿವೆ ಒಂದು ಕಾವ್ಯಾಮೃತರಸದ ಅನುಭವ. ಇನ್ನೊಂದು ಸಜ್ಜನರ ಸಹವಾಸ.

೫೮. ಅ॥ ಅರ್ಥಾಃ=ಹಣಗಳು, ಪಾದ=ಕಾಲಿನ, ರಜೋಪಮಾಃ=

धर्मं यो न करोति निन्दितमतिः स्वर्गार्गलोद्घाटनं
पश्चात्तापयुतो जरापरिगतः शोकाग्निना दह्यते ॥१५३

ಕ. युष्माभिः अतिसञ्चयः कृतः तस्य अयं दोषः । शृणु ।

---

ಧೂಳಿಗೆ ಸಮಾನವಾದುವು. ಯೌವನಂ = ತಾರುಣ್ಯವು, ಗಿರಿನದೀ = ಬೆಟ್ಟದ ನದಿಯ, ವೇಗೋಪಮಂ = ವೇಗದಂತಿರುವುದು. ಆಯುಷ್ಯಂ = ಆಯುಷ್ಯವು, ಜಲ = ನೀರಿನ, ಲೋಲ = ಅಲ್ಲಾಡುವ, ಬಿಂದು = ಹನಿಯಂತೆ, ಚಪಲಂ = ಚಂಚಲವಾದುದು. ಜೀವಿತಂ = ಬದುಕು, ಫೇನೋಪಮಂ = ನೊರೆಯಂತಿರುವುದು. ನಿಂದಿತಮತಿಃ = ನಿಂದೆಗೆ ವಿಷಯವಾದ ಬುದ್ಧಿಯುಳ್ಳ, ಯಃ = ಯಾವನು, ಸ್ವರ್ಗ = ಸ್ವರ್ಗಲೋಕದ, ಅರ್ಗಲ = ಅಗ್ಗಣಿಯನ್ನು, ಉದ್ಘಾಟನಂ = ತೆರೆಯುವ, ಧರ್ಮಂ = ಧರ್ಮವನ್ನು, ನ ಕರೋತಿ = ಮಾಡುವುದಿಲ್ಲವೊ, ಜರಾಪರಿಗತಃ = ಮುಪ್ಪನ್ನು ಹೊಂದಿದ ಅವನು, ಪಶ್ಚಾತ್ತಾಪಯುತಃ = ಪಶ್ಚಾತ್ತಾಪದಿಂದ ಕೂಡಿದವನಾಗಿ, ಶೋಕಾಗ್ನಿನಾ = ದುಃಖವೆಂಬ ಬೆಂಕಿಯಿಂದ, ದಹ್ಯತೇ = ಸುಡಲ್ಪಡುತ್ತಾನೆ.

ತಾ॥ ಕಾಲಿನ ಧೂಳು ಅಲ್ಲಿ ಇಲ್ಲಿ ಚದರಿಹೋಗುವಂತೆ ಹಣವು ಶಾಶ್ವತವಾಗಿ ನಿಲ್ಲುವುದಿಲ್ಲ. ಬೆಟ್ಟದ ನದಿಯ ವೇಗವು ಮೊದಲು ಹೆಚ್ಚಾಗಿದ್ದು ಅನಂತರ ಕಡಿಮೆಯಾಗುವಂತೆ ಯೌವನವು ಒಂದೇರೀತಿಯಿರುವುದಿಲ್ಲ. ನೀರಿನ ಹನಿಯು ಚಂಚಲವಾಗಿರುವಂತೆ ಆಯುಷ್ಯವು ಚಂಚಲವಾದುದು. ಜೀವನವು ನೀರಿನ ನೊರೆಯಂತೆ ಬೇಗನೆ ಹಾಳಾಗುವುದು. ಆದ್ದರಿಂದ ಸ್ವರ್ಗವನ್ನು ಸೇರಲು ಸಾಧನವಾದ ಧರ್ಮವನ್ನು ಆಚರಿಸದ ನೀಚಬುದ್ಧಿಯವನು ಮುಪ್ಪಿನಲ್ಲಿ ಪಶ್ಚಾತ್ತಾಪಗೊಂಡು ದುಃಖಿಸುವನು.

ಕ. ಅ॥ ಯುಷ್ಮಾಭಿಃ = ನಿಮ್ಮಿಂದ, ಅತಿಸಂಚಯಃ = ಅತ್ಯಂತ ಕೂಡಿಡುವಿಕೆಯು, ಕೃತಃ = ಮಾಡಲ್ಪಟ್ಟಿತು. ಅಯಂ = ಇದು, ತಸ್ಯ = ಅದರ, ದೋಷಃ = ಕೆಡಕು.

೬೦. उपार्जितानां वित्तानां त्याग एव हि रक्षणम् ।
तडागोदरसंस्थानां परीवाह इवाम्भसाम् ॥ १५४ ॥

೬೧. अन्यच्च ।
यदधोधः क्षितौ वित्तं निचखान मितम्पचः ।
तदधोनिलयं गन्तुं चक्रे पन्थानमग्रतः ॥ १५५ ॥

---

೬೦. ಅ॥ ತಡಾಗೋದರಸಂಸ್ಥಾನಾಂ = ಕೆರೆಯೊಳಗಿರುವ, ಅಂಭಸಾಂ = ನೀರಿಗೆ, ಪರೀವಾಹಃ ಇವ = ಕೋಡಿಯಂತೆ, ಉಪಾರ್ಜಿತಾಂ = ಸಂಪಾದಿಸಿದ, ವಿತ್ತಾನಾಂ = ಹಣಗಳಿಗೆ, ತ್ಯಾಗಃ ಏವ = ದಾನವೇ, ರಕ್ಷಣಂ = ರಕ್ಷಣೆಯು.

ತಾ॥ ಕೆರೆಯು ಮಳೆಯ ನೀರಿನಿಂದ ತುಂಬ ತುಂಬಿದಾಗ ಹೆಚ್ಚಾದ ನೀರು ಹೊರಗೆ ಹೋಗುವಂತೆ ಮಾಡಬೇಕು. ಹಾಗೆ ಮಾಡದಲ್ಲಿ ಕೆರೆಯ ಕಟ್ಟೆಯು ಒಡೆಯುವುದು. ಅದರಿಂದ ಕೆರೆಯು ನೀರೆಲ್ಲ ಹೋಗಿ ಬರಿದಾಗುವುದು. ಅದರಂತೆ ನಾವು ಸಂಪಾದಿಸಿದ ಹಣದಲ್ಲಿ ಕೆಲವು ಭಾಗವನ್ನಾದರೂ ದಾನ ಮಾಡಬೇಕು. ಹಾಗೆ ಮಾಡದಿದ್ದಲ್ಲಿ ಪೂರ್ತಿ ಹಣವು ನಾಶವಾಗುವುದು.

೬೧. ಅ॥ ಮಿತಂಪಚಃ = ಮಿತವಾಗಿ ಖರ್ಚುಮಾಡುವ ಜಿಪುಣನು, ಕ್ಷಿತೌ = ಭೂಮಿಯಲ್ಲಿ, ಅಧೋಧಃ = ಕೆಳಕೆಳಗೆ, ವಿತ್ತಂ = ಹಣವನ್ನು, ನಿಚಖಾನ = ಹೂತಿಟ್ಟನು, ಯತ್ = ಎಂಬುದು ಯಾವುದೊ, ತತ್ = ಅದನ್ನು, ಅಧೋನಿಲಯಂ = ಪಾತಾಳಕ್ಕೆ, ಗಂತುಂ = ಹೋಗುವುದಕ್ಕೆ, ಅಗ್ರತಃ = ಮುಂದೆ, ಪಂಥಾನಂ = ದಾರಿಯನ್ನಾಗಿ, ಚಕ್ರೇ = ಮಾಡಿದನು.

ತಾ॥ ಜಿಪುಣನು ಹಣವನ್ನು ಧಾರಾಳವಾಗಿ ಖರ್ಚುಮಾಡದೆ ಭೂಮಿಯಲ್ಲಿ ಹೂತಿಡುವನು. ಆ ಕುಣಿಯು ಅವನಿಗೆ ಮುಂದೆ ಪಾತಾಳಕ್ಕೆ (ನರಕಕ್ಕೆ) ಹೋಗುವ ದಾರಿಯಂತಾಗುವುದು.

೬೨. अन्यच्च ।

**निजसौख्यं निरुन्धानो यो धनार्जनमिच्छति ।**
**परार्थभारवाहीव क्लेशस्यैव हि भाजनम् ॥ १५६ ॥**

೬೩. अपरं च ।

**दानोपभोगहीनेन धनेन धनिनो यदि ।**
**भवामः किं न तेनैव धनेन धनिनो वयम् ॥ १५७ ॥**

---

೬೨. ಅ॥ ಯಃ = ಯಾವನು, ನಿಜಸೌಖ್ಯಂ=ತನ್ನ ಸುಖವನ್ನು, ನಿರುಂಧಾನಃ=ತಡೆಯುವವನಾಗಿ, ಧನಾರ್ಜನಂ=ಹಣದಸಂಪಾದನೆಯನ್ನು, ಇಚ್ಛತಿ=ಅಪೇಕ್ಷಿಸುತ್ತಾನೊ. (ಅವನು) ಪರಾರ್ಥ = ಇನ್ನೊಬ್ಬರಿಗಾಗಿ, ಭಾರವಾಹೀ ಇವ=ಹೊರೆಹೊರುವ ಕೂಲಿಯವನಂತೆ, ಕ್ಲೇಶಸ್ಯ ಏವ= ಕಷ್ಟಕ್ಕೇ, ಭಾಜನಂ ಹಿ = ಪಾತ್ರನಷ್ಟೇ ಆಗುವನು.

ತಾ॥ ಇನ್ನೊಬ್ಬರಿಗಾಗಿ ಹೊರೆಯನ್ನು ಹೊರುವ ಕೂಲಿಯವನು ತನ್ನ ಸೌಖ್ಯವನ್ನು ಮರೆತು ಹೊರೆಯ ಪ್ರಯೋಜನವನ್ನು ಪಡೆಯದೆ ಹಣಕ್ಕಾಗಿಯೇ ಕಷ್ಟಪಡುವನು. ಅದರಂತೆ ತನ್ನ ಸುಖವನ್ನು ತ್ಯಜಿಸಿ ಹಣವನ್ನು ಸಂಪಾದಿಸುವವನು ದುಃಖಕ್ಕೇ ಈಡಾಗುವನು.

೬೩. ಅ॥ ದಾನ=ಕೊಡುವುದು, ಉಪಭೋಗ = ಅನುಭವಿಸುವುದು ಇದರಿಂದ, ಹೀನೇನ= ರಹಿತವಾದ, ಧನೇನ=ಹಣದಿಂದ, ಧನಿನಃ ಯದಿ =ಹಣಗಾರರಾಗುವುದಾದರೆ, ವಯಂ = ನಾವು, ತೇನ ಧನೇನ ಏವ=ಆ ಹಣದಿಂದಲೇ, ಧನಿನಃ= ಹಣಗಾರರು, ಕಿಂ ನ ಭವಾಮಃ = ಏತಕ್ಕೆ ಆಗುವುದಿಲ್ಲ.

ತಾ॥ ಹಣವಿದ್ದರೆ ಅದನ್ನು ಇನ್ನೊಬ್ಬರಿಗೆ ಕೊಡಬೇಕು. ಮತ್ತು ತಾನು ಅನುಭೋಗಿಸಬೇಕು. ಹಾಗಿಲ್ಲದ ಹಣದಿಂದ ಹಣಗಾರರಾಗುವುದಾದರೆ, ಹಣವಿಲ್ಲದ ನಾವು ಅವರ ಆ ಹಣದಿಂದಲೇ ಏಕೆ ಹಣಗಾರರೆಂದು ಹೇಳಿಸಿ ಕೊಳ್ಳಲಾರೆವು.

೬೪. अन्यच्च ।

असम्भोगेन सामान्यं कृपणस्य धनं परैः ।
अस्येदमिति सम्बन्धो हानौ दुःखेन गम्यते ॥ १५८ ॥

೬೫. दानं प्रियवाक्सहितं ज्ञानमगर्वं क्षमान्वितं शौर्यम् ।
वित्तं त्यागनियुक्तं दुर्लभमेतच्चतुष्टयं लोके ॥ १५९ ॥

---

೬೪. ಅ॥ ಕೃಪಣಸ್ಯ=ಜಿಪುಣನ, ಧನಂ=ಹಣವು, ಪರೈಃ=ಇತರರಿಂದ, ಅಸಂಭೋಗೇನ = ಅನುಭವಿಸದಿರುವುದರಿಂದ, ಸಾಮಾನ್ಯಂ = ಸಮಾನವಾದುದು. ಇದಂ=ಇದು, ಅಸ್ಯ=ಇವನದು, ಇತಿ=ಹೀಗೆಂಬ, ಸಂಬಂಧಃ=ಸಂಬಂಧವು, ಹಾನೌ=ನಾಶವಾದಲ್ಲಿ, ದುಃಖೇನ=ದುಃಖದಿಂದ, ಗಮ್ಯತೇ=ಊಹಿಸಲ್ಪಡುತ್ತದೆ.

ತಾ॥ ಜಿಪುಣನ ಹಣವು ಅವನಿಗೂ ಇತರರಿಗೂ ಸಮಾನವಾದುದು. ಎಂದರೆ ಆ ಹಣದಿಂದ ಜಿಪುಣನಿಗೆ ಅನುಭವಿಸದಿರುವುದರಿಂದ ಸಂಬಂಧವಿಲ್ಲ. ಇತರರಿಗೂ ಹಾಗೆಯೇ. ಆದರೆ ಆ ಹಣವು ಜಿಪುಣನದೇ ಎಂಬುದು ಹಣವು ಹಾಳಾದಾಗ ಅವನು ದುಃಖಪಡುವುದರಿಂದ ತಿಳಿಯುವುದು.

೬೫. ಅ॥ ಪ್ರಿಯವಾಕ್ಸಹಿತಂ = ಹಿತವಾದ ಮಾತಿನಿಂದ ಕೂಡಿದ ದಾನವು, ಅಗರ್ವಂ=ಅಹಂಕಾರವಿಲ್ಲದ, ಜ್ಞಾನಂ=ಜ್ಞಾನವು, ಕ್ಷಮಾನ್ವಿತಂ=ಸಹನೆಯಿಂದ ಕೂಡಿದ, ಶೌರ್ಯಂ=ಪರಾಕ್ರಮವು, ತ್ಯಾಗನಿಯುಕ್ತಂ =ದಾನಕ್ಕೆ ಉಪಯೋಗಿಸಿದ, ವಿತ್ತಂ=ಹಣ, ಏತತ್ ಚತುಷ್ಟಯಂ= ಈ ನಾಲ್ಕು, ಲೋಕೇ=ಪ್ರಪಂಚದಲ್ಲಿ, ದುರ್ಲಭಂ=ಸಿಕ್ಕುವುದು ಕಷ್ಟ.

ತಾ॥ ಹಿತವಾಗಿ ಮಾತಾಡುತ್ತ ದಾನಮಾಡುವುದು, ಜ್ಞಾನವಿದ್ದರೂ ಅಹಂಕಾರ ಪಡದಿರುವುದು, ಶಕ್ತಿಯಿದ್ದರೂ ಸಹನೆಯಿಂದ ಇರುವುದು, ದಾನಕ್ಕೆ ಉಪಯೋಗಿಸಿದ ಹಣ ಈ ನಾಲ್ಕು ಪ್ರಪಂಚದಲ್ಲಿ ಸಿಕ್ಕುವುದು ಕಷ್ಟ.

೬೬. उक्तं च ।

**कर्तव्यः सञ्चयो नित्यं कर्तव्यो नातिसञ्चयः ।**
**पश्य सञ्चयशीलोऽसौ धनुषा जम्बुको हतः' ॥ १६० ॥**

೬೭. तावाहतुः—'कथमेतत्' मन्थरः कथयति—

## कथा ६

೧. आसीत्कल्याणकटकवास्तव्यो भैरवो नाम व्याधः । स चैकदा मृगमन्विष्यमाणो विन्ध्याटवीं गतवान् । ततस्तेन व्यापादितं मृगमादाय

---

೬೬. ಅ॥ ನಿತ್ಯಂ=ಯಾವಾಗಲೂ, ಸಂಚಯಃ=ಹಣದ ಸಂಗ್ರಹವು, ಕರ್ತವ್ಯಃ=ಮಾಡಬೇಕು. ಅತಿಸಂಚಯಃ = ಅತ್ಯಂತ ಸಂಗ್ರಹವು, ನ ಕರ್ತವ್ಯಃ = ಮಾಡಕೂಡದು. ಸಂಚಯಶೀಲಃ = ಸಂಗ್ರಹ ಮಾಡುವ ಸ್ವಭಾವವುಳ್ಳ, ಅಸೌ ಜಂಬುಕಃ=ಈ ನರಿಯು, ಧನುಷಾ=ಬಿಲ್ಲಿನಿಂದ, ಹತಃ=ಕೊಲ್ಲಲ್ಪಟ್ಟಿತು. ಪಶ್ಯ=ನೋಡು.

ತಾ॥ ಯಾವಾಗಲೂ ಸಂಗ್ರಹ ಮಾಡಬೇಕು ಆದರೆ ಹೆಚ್ಚು ಸಂಗ್ರಹ ಮಾಡಬಾರದು. ನೋಡು ಯಾವಾಗಲೂ ಸಂಗ್ರಹಮಾಡುತ್ತಿದ್ದ ನರಿಯು ಬಿಲ್ಲಿನಿಂದ ಕೊಲ್ಲಲ್ಪಟ್ಟಿತು.

೬೭. ಅ॥ ತೌ=ಅವುಗಳು, ಆಹತುಃ=ಹೇಳಿದುವು. ಏತತ್=ಇದು, ಕಥಂ=ಹೇಗೆ ? ಮಂಥರಃ=ಮಂಥರವು, ಕಥಯತಿ=ಹೇಳುತ್ತದೆ.

## ಆರನೆ ಕಥೆ

೧. ಅ॥ ಕಲ್ಯಾಣಕಟಕ=ಕಲ್ಯಾಣವೆಂಬ ತಪ್ಪಲಲ್ಲಿ, ವಾಸ್ತವ್ಯಃ=ವಾಸ ಮಾಡಿಕೊಂಡಿರುವ, ಭೈರವಃ ನಾಮ=ಭೈರವನೆಂಬ, ವ್ಯಾಧಃ=ಬೇಡನು, ಆಸೀತ್=ಇದ್ದನು ಸಃ ಚ=ಅವನು, ಏಕದಾ=ಒಂದಾನೊಂದು ವೇಳೆ, ಮೃಗಂ=ಮೃಗವನ್ನು, ಅನ್ವಿಷ್ಯಮಾಣಃ=ಹುಡುಕುತ್ತ, ವಿಂಧ್ಯಾಟವೀಂ=

गच्छता घोराकृतिः सूकरो दृष्टः । तेन व्याधेन मृगं भूमौ निधाय सूकरः शरेणाहतः । सूकरेणापि घनघोरगर्जनं कृत्वा स व्याधो मुष्कदेशे हतः सन् छिन्नद्रुमः इव भूमौ निपपात । यतः

१. जलमग्निर्विषं शस्त्रं क्षुद्व्याधिः पतनं गिरेः ।
निमित्तं किञ्चिदासाद्य देही प्राणैर्विमुच्यते ॥ १६१ ॥

---

ವಿಂಧ್ಯಾರಣ್ಯಕ್ಕೆ, ಗತವಾನ್=ಹೋದನು ತತಃ=ಬಳಿಕ, ವ್ಯಾಪಾದಿತಂ= ಕೊಲ್ಲಲ್ಪಟ್ಟ, ಮೃಗಂ = ಜಿಂಕೆಯನ್ನು, ಆದಾಯ = ತೆಗೆದುಕೊಂಡು, ಗಚ್ಛತಾ=ಹೋಗುತ್ತಿರುವ, ತೇನ = ಆ ಬೇಡನಿಂದ, ಘೋರಾಕೃತಿಃ= ಭಯಂಕರಾಕಾರವುಳ್ಳ, ಸೂಕರಃ=ಹಂದಿಯು, ದೃಷ್ಟಃ=ನೋಡಲ್ಪಟ್ಟಿತು. ತೇನ ವ್ಯಾಧೇನ=ಆ ಬೇಡನಿಂದ, ಮೃಗಂ=ಜಿಂಕೆಯನ್ನು, ಭೂಮೌ= ನೆಲದ ಮೇಲೆ, ನಿಧಾಯ=ಇಟ್ಟು, ಸೂಕರಃ=ಹಂದಿಯು, ಆಹತಃ=ಹೊಡೆಯಲ್ಪಟ್ಟಿತು. ಸೂಕರೇಣ ಅಪಿ=ಹಂದಿಯಿಂದಲೂ, ಘನ=ಮೋಡದಂತೆ, ಘೋರ=ಭಯಂಕರವಾಗಿ, ಗರ್ಜನಂ=ಗರ್ಜನೆಯನ್ನು, ಕೃತ್ವಾ=ಮಾಡಿ, ಸಃ ವ್ಯಾಧಃ=ಆ ಬೇಡನು, ಮುಷ್ಕದೇಶೇ=ಅಂಡಕೋಶದಲ್ಲಿ, ಹತಃ ಸನ್ = ತಿವಿಯಲ್ಪಟ್ಟವನಾಗಿ, ಛಿನ್ನದ್ರುಮಃ ಇವ = ಕತ್ತರಿಸಿದ ಮರದಂತೆ, ಭೂಮೌ=ನೆಲದಮೇಲೆ, ನಿಪಪಾತ=ಬಿದ್ದನು.

೧. ಅ॥ ದೇಹೀ=ಪ್ರಾಣಿಯು, ಜಲಂ=ನೀರು, ಅಗ್ನಿಃ=ಬೆಂಕಿ, ವಿಷಂ =ವಿಷ, ಶಸ್ತ್ರಂ=ಆಯುಧ, ಕ್ಷುತ್=ಹಸಿವು, ವ್ಯಾಧಿಃ=ಕಾಯಿಲೆ, ಗಿರೇಃ = ಬೆಟ್ಟದಿಂದ, ಪತನಂ = ಬೀಳುವಿಕೆ (ಹೀಗೆ), ಕಿಂಚಿತ್=ಯಾವುದೋ ಒಂದು, ನಿಮಿತ್ತಂ=ಕಾರಣವನ್ನು, ಆಸಾದ್ಯ=ಹೊಂದಿ, ಪ್ರಾಣೈಃ=ಪ್ರಾಣದಿಂದ, ವಿಮುಚ್ಯತೇ=ಬಿಡಲ್ಪಡುತ್ತದೆ.

ತಾ॥ ಪ್ರಾಣಿಯು ನೀರು, ಬೆಂಕಿ, ವಿಷ, ಆಯುಧ, ಹಸಿವು, ಕಾಯಿಲೆ, ಬೆಟ್ಟದಿಂದ ಬೀಳುವುದು ಇವುಗಳಲ್ಲಿ ಯಾವುದಾದರೊಂದು ಕಾರಣದಿಂದ ಸಾಯುತ್ತದೆ.

३. अथ तयोः पादास्फालनेन सर्पोऽपि मृतः । अथानन्तरं दीर्घरावो नाम जम्बुकः परिभ्रमन्नाहारार्थी तान्मृतान्मृगव्याधसर्पसूकरानपश्यत् । अचिन्तयच्च । 'अहो, अद्य महद्भोज्यं मे समुपस्थितम् । अथ वा ।

४. अचिन्तितानि दुःखानि यथैवायान्ति देहिनाम् ।
सुखान्यपि तथा मन्ये दैवमत्रातिरिच्यते ॥ १६२ ॥

೫. तद्भवतु । एषां मांसैर्मासत्रयं मे सुखेन गमिष्यति ।

---

೩. ಅ॥ ಅಥ=ಬಳಿಕ, ತಯೋಃ=ಆ ಹಂದಿ ಮತ್ತು ಬೇಡನ, ಪಾದ=ಕಾಲುಗಳ, ಆಸ್ಫಾಲನೇನ=ಹೊಡೆತದಿಂದ, ಸರ್ಪಃ ಅಪಿ=ಒಂದು ನಾಗರ ಹಾವೂ,ಮೃತಃ=ಸತ್ತಿತು. ಅಥ ಅನಂತರಂ=ಅದಾದ ತರುವಾಯ, ದೀರ್ಘ-ರಾವಃ ನಾಮ=ದೀರ್ಘರಾವನೆಂಬ, ಜಂಬುಕಃ=ನರಿಯು, ಆಹಾರಾರ್ಥೀ=ಆಹಾರವನ್ನು ಅಪೇಕ್ಷಿಸುವುದಾಗಿ, ಪರಿಭ್ರಮನ್=ಅಲೆಯುತ್ತ, ಮೃತಾನ್=ಸತ್ತ, ತಾನ್=ಆ, ಮೃಗ=ಜಿಂಕೆ, ವ್ಯಾಧ=ಬೇಡ, ಸರ್ಪ=ನಾಗರ ಹಾವು, ಸೂಕರಾನ್=ಹಂದಿ ಇವುಗಳನ್ನು, ಅಪಶ್ಯತ್=ನೋಡಿತು. ಚ=ಮತ್ತು, ಅಚಿಂತಯತ್=ಆಲೋಚಿಸಿತು. ಅಹೋ=ಆಶ್ಚರ್ಯ. ಅದ್ಯ=ಈ ದಿನ, ಮೇ=ನನಗೆ, ಮಹತ್=ದೊಡ್ಡ, ಭೋಜ್ಯಂ=ಊಟವು, ಸಮುಪ-ಸ್ಥಿತಃ=ಒದಗಿದೆ. ಅಥವಾ,

೪. ಅ॥ ದೇಹಿನಾಂ=ಪ್ರಾಣಿಗಳಿಗೆ, ಯಥಾ ಏವ=ಹೇಗೆ, ಅಚಿಂತಿತಾನಿ=ಆಲೋಚಿಸಲ್ಪಡದ, ದುಃಖಾನಿ=ದುಃಖಗಳು, ಆಯಾಂತಿ=ಬರುವವೊ, ತಥಾ=ಹಾಗೆಯೇ, ಸುಖಾನಿ ಅಪಿ=ಸುಖಗಳೂ, (ಬರುವುವು) ಅತ್ರ=ಈ ವಿಷಯದಲ್ಲಿ, ದೈವಂ=ಅದೃಷ್ಟವು, ಅತಿರಿಚ್ಯತೇ=ಅಧಿಕವಾಗುವುದೆಂದು, ಮನ್ಯೇ=ತಿಳಿಯುತ್ತೇನೆ.

ತಾ॥ ಪ್ರಾಣಿಗಳಿಗೆ ತಾವು ಆಲೋಚಿಸದ ದುಃಖಗಳು ಬರುವುವು. ಹಾಗೆಯೇ ಸುಖಗಳೂ ಒದಗುವುವು ಇವೆಲ್ಲ ಅದೃಷ್ಟದಿಂದಲೇ ಆಗುವುವು.

೫ ಅ॥ ತತ್=ಆದ್ದರಿಂದ, ಭವತು=ಆಗಲಿ. ಏಷಾಂ=ಇವುಗಳ,

१. मासमेकं नरो याति द्वौ मासौ मृगसूकरौ ।
अहिरेकं दिनं याति अद्य भक्ष्यो धनुर्गुणः ॥ १६३ ॥

२. ततः प्रथमबुभुक्षायामिदं निःस्वादु कोदण्डलग्नं स्नायुबन्धनं खादामि' इत्युक्त्वा तथा कृते सति छिन्ने स्नायुबन्धन उत्पतितेन धनुषा हृदि निर्भिन्नः स दीर्घरावः पञ्चत्वं गतः । अतोऽहं ब्रवीमि—'कर्तव्यः सञ्चयो नित्यम्' इत्यादि ॥ तथा च ।

---

ಮಾಂಸೈಃ = ಮಾಂಸಗಳಿಂದ, ಮೇ = ನನಗೆ, ಮಾಸತ್ರಯಂ = ಮೂರು ತಿಂಗಳು, ಸುಖೇನ = ಸುಖದಿಂದ, ಗಮಿಷ್ಯತಿ = ಹೋಗುವುದು (ಕಳೆಯುವುದು.)

೧. ಅ॥ ಏಕಂ = ಒಂದು, ಮಾಸಂ = ತಿಂಗಳು, ನರಃ = ಮನುಷ್ಯನು, ದ್ವೌ ಮಾಸೌ = ಎರಡು ತಿಂಗಳು, ಮೃಗಸೂಕರೌ = ಜಿಂಕೆ ಮತ್ತು ಹಂದಿಗಳು, ಏಕಂ ದಿನಂ = ಒಂದು ದಿನ, ಅಹಿಃ = ಹಾವು, ಯಾತಿ = ಕಳೆಯುತ್ತದೆ. ಅದ್ಯ = ಈ ದಿನ, ಧನುರ್ಗುಣಃ = ಬಿಲ್ಲಿನ ಹಗ್ಗವು, ಭಕ್ಷ್ಯಃ = ತಿನ್ನಲು ಯೋಗ್ಯವು.

ತಾ॥ ಮನುಷ್ಯನು ಒಂದು ತಿಂಗಳವರೆಗೂ, ಜಿಂಕೆ ಮತ್ತು ಹಂದಿಗಳು ಎರಡು ತಿಂಗಳವರೆಗೂ, ಹಾವು ಒಂದು ದಿನದವರೆಗೂ ಆಹಾರವಾಗುವುವು. ಆದರೆ ಈದಿನ ಮೊದಲು ಬಿಲ್ಲಿನ ನಾಣನ್ನು ತಿನ್ನಬೇಕು.

೨. ಅ॥ ತತಃ = ಬಳಿಕ, ಪ್ರಥಮಬುಭುಕ್ಷಾಯಾಂ = ಮೊದಲಿನ ಹಸಿವಿನಲ್ಲಿ, ಇದಂ = ಈ, ನಿಸ್ಸ್ವಾದು = ರುಚಿಯಿಲ್ಲದ, ಕೋದಂಡಲಗ್ನಂ = ಬಿಲ್ಲಿಗೆ ಸೇರಿಕೊಂಡಿರುವ, ಸ್ನಾಯುಬಂಧನಂ = ನರದ ಕಟ್ಟನ್ನು, ಖಾದಾಮಿ = ತಿನ್ನುತ್ತೇನೆ.' ಇತಿ ಉಕ್ತ್ವಾ = ಹೀಗೆ ಹೇಳಿ, ತಥಾ ಕೃತೇ ಸತಿ = ಹಾಗೆ ಮಾಡಲ್ಪಡಲು, ಸ್ನಾಯುಬಂಧನೇ = ನರದಕಟ್ಟು, ಛಿನ್ನೇ = ಕತ್ತರಿಸಲ್ಪಡಲು, ಉತ್ಪತಿತೇನ = ಮೇಲಕ್ಕೆ ಹಾರಿದ, ಧನುಷಾ = ಬಿಲ್ಲಿನಿಂದ, ಹೃದಿ = ಎದೆಯಲ್ಲಿ, ನಿರ್ಭಿನ್ನಃ = ಸೀಳಲ್ಪಟ್ಟದ್ದಾಗಿ, ಸಃ ದೀರ್ಘರಾವಃ = ಆ ದೀರ್ಘರಾವ ಎಂಬ

೮. यद्दाति यदश्नाति तदेव धनिनो धनम् ।
अन्ये मृतस्य क्रीडन्ति दारैरपि धनैरपि ॥ १६४ ॥

೯. किं च ।

यद्ददासि विशिष्टेभ्यो यच्चाश्नासि दिने दिने ।
तत्ते वित्तमहं मन्ये शेषं कस्यापि रक्षसि ॥ १६५ ॥

---

ನರಿಯು, ಪಂಚತ್ವಂ ಗತಃ=ಸತ್ತಿತು. ಅತಃ ಅಹಂ ಬ್ರವೀಮಿ=ಆದ್ದರಿಂದ ನಾನು ಹೇಳುತ್ತೇನೆ. ಕರ್ತವ್ಯಃ ಸಂಚಯಃ ನಿತ್ಯಂ ಇತ್ಯಾದಿ=ಯಾವಾಗಲೂ ಸಂಗ್ರಹ ಮಾಡಬೇಕು ಎಂಬುದೇ ಮೊದಲಾದುದನ್ನು, ತಥಾ ಚ=ಹಾಗೆಯೇ.

೮. ಅ॥ ಯತ್=ಯಾವುದನ್ನು, ದದಾತಿ=ಕೊಡುತ್ತಾನೊ, ಯತ್=ಯಾವುದನ್ನು, ಅಶ್ನಾತಿ=ತಿನ್ನುತ್ತಾನೊ, ತದೇವ=ಅದೇ, ಧನಿನಃ=ಹಣಗಾರನ, ಧನಂ=ಹಣವು. ಅನ್ಯೇ=ಇತರರು, ಮೃತಸ್ಯ=ಸತ್ತವನ, ದಾರೈಃ ಅಪಿ = ಹೆಂಡತಿಯಿಂದಲೂ, ಧನೈಃ ಅಪಿ = ಹಣದಿಂದಲೂ, ಕ್ರೀಡಂತಿ=ವಿನೋದಗೊಳ್ಳುತ್ತಾರೆ.

ತಾ॥ ಹಣಗಾರನು ತಾನು ದಾನಮಾಡಿದ ಮತ್ತು ಅನುಭವಿಸಿದ ಹಣವೇ ಅವನದ್ದಾಗಿರುವುದು. ಹಾಗೆ ದಾನಮಾಡದೆ ಅನುಭವಿಸದೆ ಸತ್ತ ಹಣಗಾರನ ಹೆಂಡತಿ ಮತ್ತು ಹಣವು ಇತರರ ಸುಖಕ್ಕೆ ಕಾರಣವಾಗುವುವು.

೯. ಅ॥ ವಿಶಿಷ್ಟೇಭ್ಯಃ=ಉತ್ತಮರಿಗೆ, ಯತ್=ಯಾವುದನ್ನು, ದದಾಸಿ=ಕೊಡುತ್ತೀಯೊ, ಯತ್ = ಯಾವುದನ್ನು, ದಿನೇ ದಿನೇ = ಪ್ರತಿದಿನ, ಅಶ್ನಾಸಿ=ಅನುಭವಿಸುತ್ತೀಯೊ, ತತ್=ಅದನ್ನು, ತೇ=ನಿನ್ನ, ವಿತ್ತಂ=ಹಣವನ್ನಾಗಿ, ಅಹಂ=ನಾನು, ಮನ್ಯೇ=ತಿಳಿಯುತ್ತೇನೆ. ಕಸ್ಯ ಅಪಿ=ಯಾವನದ್ದೊ, ಶೇಷಂ=ಉಳಿದುದನ್ನು, ರಕ್ಷಸಿ=ಕಾಪಾಡುತ್ತೀ.

ತಾ॥ ನೀನು ಉತ್ತಮರಿಗೆ ದಾನಮಾಡಿದ, ಮತ್ತು ಅನುಭವಿಸಿದ ಹಣವೇ

೧೦. यातु । किमिदानीमतिक्रान्तोपवर्णनेन । यतः ।

೧೧. नाप्राप्यमभिवाञ्छन्ति नष्टं नेच्छन्ति शोचितुम् ।
आपत्स्वपि न मुह्यन्ति नराः पण्डितबुद्धयः ॥ १६६ ॥

೧೨. तत्सखे, सर्वदा त्वया सोत्साहेन भवितव्यम् । यतः

೧೩. शास्त्राण्यधीत्यापि भवन्ति मूर्खा
यस्तु क्रियावान् पुरुषः स विद्वान् ।

---

ನಿನ್ನದೆಂದು ನಾನು ತಿಳಿಯುತ್ತೇನೆ ಹಾಗೆ ಮಾಡದೆ ಉಳಿದ ನಿನ್ನ ಹಣವು ಬೇರೆಯವರದ್ದು. ಅದನ್ನು ನೀನು ಕಾಪಾಡುತ್ತಿರುವಿ ಅಷ್ಟೆ.

೧೦. ಅ॥ ಯಾತು=ಹೋಗಲಿ. ಇದಾನೀಂ=ಈಗ, ಅತಿಕ್ರಾಂತೋಪವರ್ಣನೇನ = ಕಳೆದುಹೋದುದನ್ನು ಬಣ್ಣಿಸುವುದರಿಂದ, ಕಿಂ = ಏನು ಪ್ರಯೋಜನ ?

೧೧. ಅ॥ ಪಂಡಿತಬುದ್ಧಯಃ=ವಿದ್ವಾಂಸರಾದ, ನರಾಃ=ಮನುಷ್ಯರು, ಅಪ್ರಾಪ್ಯಂ=ಹೊಂದಲಶಕ್ಯವಾದುದನ್ನು, ನ ಅಭಿವಾಂಛಂತಿ = ಅಪೇಕ್ಷಿಸುವುದಿಲ್ಲ. ನಷ್ಟಂ = ಹಾಳಾದುದನ್ನು ಕುರಿತು, ಶೋಚಿತುಂ = ದುಃಖಿಸುವುದಕ್ಕೆ, ನ ಇಚ್ಛಂತಿ = ಅಪೇಕ್ಷಿಸುವುದಿಲ್ಲ. ಆಪತ್ಸು ಅಪಿ = ಕಷ್ಟಗಳಲ್ಲಿಯೂ, ನ ಮುಹ್ಯಂತಿ=ಭ್ರಾಂತಿಗೊಳ್ಳುವುದಿಲ್ಲ.

ತಾ॥ ಜ್ಞಾನಿಗಳು ತಮಗೆ ಸಿಗಲಾರದ ವಸ್ತುವನ್ನು ಬೇಕೆಂದು ಬಯಸುವುದಿಲ್ಲ. ಹಾಳಾದುದನ್ನು ಉದ್ದೇಶಿಸಿ ದುಃಖಿಸುವುದಿಲ್ಲ. ಕಷ್ಟಕಾಲದಲ್ಲಿಯೂ ಮೂಢರಾಗುವುದಿಲ್ಲ.

೧೨. ಅ॥ ತತ್=ಅದ್ದರಿಂದ, ಸಖೇ=ಸ್ನೇಹಿತನೆ, ತ್ವಯಾ=ನಿನ್ನಿಂದ, ಸರ್ವದಾ=ಯಾವಾಗಲೂ, ಸೋತ್ಸಾಹೇನ ಭವಿತವ್ಯಂ=ಉತ್ಸಾಹವುಳ್ಳವನಾಗಿರತಕ್ಕದ್ದು. ಯತಃ=ಯಾವಕಾರಣದಿಂದ,

೧೩. ಅ॥ ಶಾಸ್ತ್ರಾಣಿ = ಶಾಸ್ತ್ರಗಳನ್ನು, ಅಧೀತ್ಯ ಅಪಿ = ಓದಿಯೂ

सुचिन्तितं चौषधमातुराणां
न नाममात्रेण करोत्यरोगम् ॥ १६७ ॥

೧೪. अन्यच्च ।

न स्वल्पमप्यध्यवसायभीरोः
करोति विज्ञानविधिर्गुणं हि ।
अन्धस्य किं हस्ततलस्थितोऽपि
प्रकाशयत्यर्थमिह प्रदीपः ॥ १६८ ॥

---

ಕೂಡ, ಮೂರ್ಖಾಃ ಭವಂತಿ = ಮೂರ್ಢರಾಗುತ್ತಾರೆ. ಯಃ ತು = ಯಾವನು, ಕ್ರಿಯಾವಾನ್ = ಕೆಲಸವುಳ್ಳವನೊ, ಸಃ = ಅವನು, ವಿದ್ವಾನ್ = ವಿದ್ವಾಂಸನು. ಸುಚಿಂತಿತಂ = ಚೆನ್ನಾಗಿ ಆಲೋಚಿಸಿದ, ಔಷಧಂ = ಔಷಧವು, ಆತುರಾಣಾಂ = ಕಾಯಿಲೆಯವರಿಗೆ, ನಾಮಮಾತ್ರೇಣ = ಹೆಸರಿನಿಂದಲೇ, ಅರೋಗಂ = ರೋಗವಿಲ್ಲದಿರುವಿಕೆಯನ್ನು, ನ ಕರೋತಿ = ಮಾಡುವುದಿಲ್ಲ.

ತಾ॥ ಶಾಸ್ತ್ರಗಳನ್ನು ಓದಿದರೂ ಮನುಷ್ಯರು ಮೂರ್ಢರಾಗುತ್ತಾರೆ. ಆ ಶಾಸ್ತ್ರವನ್ನು ಆಚರಣೆಯಲ್ಲಿಟ್ಟುಕೊಂಡವನೇ ಜ್ಞಾನಿಯು. ಕಾಯಿಲೆಯನ್ನು ವಾಸಿಮಾಡುವುದೆಂದು ನಿಶ್ಚಯಿಸಲ್ಪಟ್ಟ ಔಷಧದ ಹೆಸರನ್ನು ಹೇಳುವುದರಿಂದ ಮಾತ್ರ ರೋಗಿಯ ಕಾಯಿಲೆಯು ವಾಸಿಯಾಗುವುದಿಲ್ಲ. ಅದನ್ನು ಸೇವಿಸಿದಾಗಲೆ ಅದರ ಗುಣವು ತಿಳಿಯುವುದು.

೧೪. ಅ॥ ಅಧ್ಯವಸಾಯಭೀರೋಃ = ನಿಶ್ಚಯಿಸಿ ಕೆಲಸ ಮಾಡುವುದರಲ್ಲಿ ಹೆದರಿಕೆಯುಳ್ಳವನಿಗೆ, ವಿಜ್ಞಾನವಿಧಿಃ = ಜ್ಞಾನ ವ್ಯಾಪಾರವು, ಸ್ವಲ್ಪಂ ಅಪಿ = ಅಲ್ಪವೂ, ಗುಣಂ = ಗುಣವನ್ನು, ನ ಕರೋತಿ ಹಿ = ಮಾಡುವುದಿಲ್ಲವಷ್ಟೆ. ಇಹ = ಈ ಪ್ರಪಂಚದಲ್ಲಿ, ಪ್ರದೀಪಃ = ದೊಡ್ಡ ದೀಪವು, ಹಸ್ತತಲಸ್ಥಿತಃ ಅಪಿ = ಅಂಗೈಯಲ್ಲಿದ್ದರೂ, ಅಂಧಸ್ಯ = ಕುರುಡನಿಗೆ, ಅರ್ಥಂ = ವಸ್ತುವನ್ನು, ಪ್ರಕಾಶಯತಿ ಕಿಂ = ಪ್ರಕಾಶಗೊಳಿಸುವುದೊ ?

೧೫. तदत्र सखे दशाविशेषे शान्तिः करणीया । एतदपि अतिकष्टं त्वया न मन्तव्यम् । यतः ।

೧೬. राजा कुलवधूर्विप्रा मन्त्रिणश्च पयोधराः ।
स्थानभ्रष्टा न शोभन्ते दन्ताः केशा नखा नराः ॥१६९॥

೧೭. इति विज्ञाय मतिमान् स्वस्थानं न परित्यजेत् । कापुरुषवचनमेतत् । यतः ।

---

ತಾ॥ ಕೈಯಲ್ಲಿ ದೀಪವಿದ್ದರೂ ಅದನ್ನು ಉಪಯೋಗಿಸಿ ಪದಾರ್ಥವನ್ನು ನೋಡಲು ಕುರುಡನು ಸಮರ್ಥನಾಗುವುದಿಲ್ಲ. ಹಾಗೆಯೇ ಬುದ್ಧಿವಂತನಾದರೂ ನಿಶ್ಚಯಿಸಿ ಕೆಲಸಮಾಡಲು ಹೆದರುವ ಅವನಿಗೆ ಜ್ಞಾನವು ಏನೂ ಪ್ರಯೋಜನವಾಗುವುದಿಲ್ಲ.

೧೫. ಅ॥ ಸಖೇ=ಸ್ನೇಹಿತನೆ! ತತ್=ಆದ್ದರಿಂದ, ಅತ್ರ ದಶಾವಿಶೇಷೇ =ಈ ಸ್ಥಿತಿಯಲ್ಲಿ, ಶಾಂತಿಃ=ಸಮಾಧಾನವು, ಕರಣೀಯಾ=ಮಾಡತಕ್ಕುದು. ಏತತ್ ಅಪಿ=ಇದೂ, ತ್ವಯಾ=ನಿನ್ನಿಂದ, ಅತಿಕಷ್ಟಂ=ಅತ್ಯಂತ ಕಷ್ಟವಾದುದಾಗಿ, ನ ಮಂತವ್ಯಂ=ತಿಳಿಯಕೂಡದು.

೧೬. ಅ॥ ಸ್ಥಾನಭ್ರಷ್ಟಾಃ = ಸ್ಥಳ ತಪ್ಪಿದ, ರಾಜಾ = ರಾಜನು, ಕುಲವಧೂಃ=ಕುಲಾಂಗನೆ, ವಿಪ್ರಾಃ=ಬ್ರಾಹ್ಮಣರು, ಮಂತ್ರಿಣಃ=ಮಂತ್ರಿಗಳು, ಪಯೋಧರಾಃ = ಸ್ತನಗಳು, ದಂತಾಃ=ಹಲ್ಲುಗಳು, ಕೇಶಾಃ= ಕೂದಲು, ನಖಾಃ=ಉಗುರು, ನರಾಃ=ಮನುಷ್ಯರು, ನ ಶೋಭಂತೇ= ಪ್ರಕಾಶಿಸುವುದಿಲ್ಲ

ತಾ॥ ಸ್ವಸ್ಥಾನವನ್ನು ಕಳೆದುಕೊಂಡ ದೊರೆ, ಸತ್ಕುಲದಲ್ಲಿ ಹುಟ್ಟಿದ ಹೆಂಗಸು, ಬ್ರಾಹ್ಮಣರು, ಮಂತ್ರಿಗಳು, ಸ್ತನಗಳು, ಹಲ್ಲುಗಳು, ಕೂದಲು, ಉಗುರು, ಮನುಷ್ಯರು ಇವರು ಶೋಭಿಸುವುದಿಲ್ಲ.

೧೭. ಅ॥ ಇತಿ=ಹೀಗೆಂದು; ವಿಜ್ಞಾಯ = ತಿಳಿದು, ಮತಿಮಾನ್=

೧೮. स्थानमुत्सृज्य गच्छन्ति सिंहाः सत्पुरुषा गजाः ।
तत्रैव निधनं यान्ति काका कापुरुषा मृगाः ॥ १७० ॥

೧೯. को वीरस्य मनस्विनः स्वविषयः को वा विदेशस्तथा
यं देशं श्रयते तमेव कुरुते बाहुप्रतापार्जितम् ।
यद्दंष्ट्रानखलाङ्गुलप्रहरणः सिंहो वनं गाहते
तस्मिन्नेव हतद्विपेन्द्ररुधिरैस्तृष्णां छिनत्त्यात्मनः ॥

---

ಬುದ್ಧಿವಂತನು, ಸ್ವಸ್ಥಾನಂ=ತನ್ನ ಸ್ಥಳವನ್ನು, ನ ಪರಿತ್ಯಜೇತ್ = ಬಿಡಕೂಡದು. ಏತತ್=ಇದು, ಕಾಪುರುಷವಚನಂ=ದುಷ್ಟರ ಮಾತು.

೧೮. ಅ॥ ಸಿಂಹಾಃ=ಸಿಂಹಗಳು, ಸತ್ಪುರುಷಾಃ=ಸಜ್ಜನರು, ಗಜಾಃ =ಆನೆಗಳು, ಕಾಕಾಃ=ಕಾಗೆಗಳು, ಕಾಪುರುಷಾಃ=ದುರ್ಜನರು, ಮೃಗಾಃ =ಜಿಂಕೆಗಳು, ಸ್ಥಾನಂ = ತಮ್ಮ ಸ್ಥಳವನ್ನು, ಉತ್ಸೃಜ್ಯ = ಬಿಟ್ಟು, ಗಚ್ಛಂತಿ=ಹೋಗುತ್ತವೆ. ತತ್ರ ಏವ=ಅಲ್ಲಿಯೇ, ನಿಧನಂ ಯಾಂತಿ= ಸಾಯುತ್ತವೆ.

ತಾ॥ ಪ್ರಪಂಚದಲ್ಲಿ ಸಿಂಹಗಳು, ಸಜ್ಜನರು, ಆನೆಗಳು, ಕಾಗೆಗಳು, ದುರ್ಜನರು, ಜಿಂಕೆಗಳು ಇವು ತಮ್ಮ ಸ್ಥಳವನ್ನು ತ್ಯಜಿಸಿ ಬೇರೆ ಸ್ಥಳಕ್ಕೆ ಹೋಗಿ ನೆಲೆಸಿ ಅಲ್ಲಿಯೇ ಮೃತವಾಗುವುವು.

೧೯. ಅ॥ ವೀರಸ್ಯ=ಪರಾಕ್ರಮಶಾಲಿಯಾದ,ಮನಸ್ವಿನಃ=ದೃಢಮನಸ್ಸಿನವನಿಗೆ,ಸ್ವವಿಷಯಃ=ತನ್ನ ದೇಶವು,ಕಃ=ಯಾವುದು ? ತಥಾ=ಹಾಗೆಯೇ, ವಿದೇಶಃ=ಪರದೇಶವು, ಕಃ ವಾ=ಯಾವುದು ? ಯಂ ದೇಶಂ=ಯಾವ ದೇಶವನ್ನು, ಶ್ರಯತೇ=ಆಶ್ರಯಿಸುತ್ತಾನೋ; ತಂ ಏವ=ಆ ದೇಶವನ್ನೇ, ಬಾಹುಪ್ರತಾಪಾರ್ಜಿತಂ=ತೋಳಿನ ಶಕ್ತಿಯಿಂದ ಸಂಪಾದಿಸಲ್ಪಟ್ಟದ್ದನ್ನಾಗಿ, ಕುರುತೇ=ಮಾಡುತ್ತಾನೆ. ದಂಷ್ಟ್ರಾ=ಹಲ್ಲು, ನಖ=ಉಗುರು, ಲಾಂಗುಲ =ಬಾಲ ಇವುಗಳೇ, ಪ್ರಹರಣಃ=ಆಯುಧವಾಗುಳ್ಳ, ಸಿಂಹಃ=ಸಿಂಹವು,

೨೦. अपरं च ।

**निपानमिव मण्डूकाः सरः पूर्णमिवाण्डजाः ।**
**सोद्योगं नरमायान्ति विवशाः सर्वसम्पदः ॥ १७२ ॥**

೨೧. अन्यच्च ।

**सुखमापतितं सेव्यं दुःखमापतितं तथा ।**
**चक्रवत्परिवर्तन्ते दुःखानि च सुखानि च ॥ १७३ ॥**

---

ಯತ್ = ಯಾವ, ವನಂ = ಕಾಡನ್ನು, ಗಾಹತೇ = ಪ್ರವೇಶ ಮಾಡುವುದೋ ; ತಸ್ಮಿನ್ ಏವ = ಅದೇ ಕಾಡಿನಲ್ಲಿ, ಹತ = ಕೊಲ್ಲಲ್ಪಟ್ಟ, ದ್ವಿಪೇಂದ್ರ = ಸಲಗದ, ರುಧಿರೈಃ = ರಕ್ತಗಳಿಂದ, ಆತ್ಮನಃ = ತನ್ನ, ತೃಷ್ಣಾಂ = ಬಾಯಾರಿಕೆಯನ್ನು, ಛಿನತ್ತಿ = ಪರಿಹರಿಸಿಕೊಳ್ಳುತ್ತದೆ.

ತಾ॥ ಸಿಂಹವು ತಾನು ಹೊಕ್ಕ ಕಾಡಿನಲ್ಲಿ ತನ್ನ ಹಲ್ಲು, ಉಗುರು, ಬಾಲಗಳ ಸಹಾಯದಿಂದ ಮದ್ದಾನೆಯನ್ನು ಕೊಂದು ಅದರ ರಕ್ತವನ್ನು ಹೀರಿ ಬಾಯಾರಿಕೆಯನ್ನು ನೀಗಿಕೊಳ್ಳುತ್ತದೆ. ಹಾಗೆಯೇ ವೀರನಾದ ಸ್ಥಿರಚಿತ್ತನಿಗೆ ತನ್ನ ದೇಶ ಯಾವುದು. ಪರದೇಶವಾವುದು. ತಾನು ಹೊಕ್ಕ ದೇಶವನ್ನೇ ಭುಜಬಲದಿಂದ ತನ್ನದಾಗಿ ಮಾಡಿಕೊಳ್ಳುವನು.

೨೦. ಅ॥ ಮಂಡೂಕಾಃ = ಕಪ್ಪೆಗಳು, ನಿಪಾನಂ ಇವ = ನೀರಿನ ತೊಟ್ಟಿಯಂತೆಯೂ, ಅಂಡಜಾಃ = ಹಕ್ಕಿಗಳು, ಪೂರ್ಣಂ = ತುಂಬಿದ, ಸರಃ ಇವ = ಸರೋವರದಂತೆಯೂ, ಸೋದ್ಯೋಗಂ = ಕೆಲಸ ಮಾಡುವ, ನರಂ = ಮನುಷ್ಯನನ್ನು ಕುರಿತು, ವಿವಶಾಃ = ಸ್ವಾಧೀನತೆಯಿಲ್ಲದ, ಸರ್ವಸಂಪದಃ = ಎಲ್ಲಾ ಐಶ್ವರ್ಯಗಳು, ಆಯಾಂತಿ = ಬರುತ್ತವೆ.

ತಾ॥ ಕಪ್ಪೆಗಳು ತಾವಾಗಿಯೇ ನೀರಿನ ತೊಟ್ಟಿಗೆ ಬರುವುವು. ಹಕ್ಕಿಗಳು ನೀರು ತುಂಬಿರುವ ಕೊಳಕ್ಕೆ ನೀರು ಕುಡಿಯಲು ಬರುವುವು. ಹಾಗೆಯೇ ಕೆಲಸ ಮಾಡುತ್ತಿರುವ ಮನುಷ್ಯನಿಗೆ ಸಂಪತ್ತುಗಳು ತಾವಾಗಿಯೇ ಬಂದು ಸೇರುವುವು.

೨೨. अन्यच्च ।

उत्साहसम्पन्नमदीर्घसूत्रं
क्रियाविधिज्ञं व्यसनेष्वसक्तम् ।
शूरं कृतज्ञं दृढसौहृदं च
लक्ष्मीः स्वयं याति निवासहेतोः ॥ १७४ ॥

---

೨೧. ಅ॥ ಆಪತಿತಂ = ಬಂದ, ಸುಖಂ = ಸುಖವೂ, ತಥಾ = ಹಾಗೆಯೇ, ಆಪತಿತಂ = ಬಂದ, ದುಃಖಂ = ದುಃಖವೂ, ಸೇವ್ಯಂ = ಸೇವಿಸತಕ್ಕುದು. ದುಃಖಾನಿ ಚ = ದುಃಖಗಳೂ, ಸುಖಾನಿ ಚ = ಸುಖಗಳೂ, ಚಕ್ರವತ್ = ಚಕ್ರದಂತೆ, ಪರಿವರ್ತಂತೇ = ಸುತ್ತುತ್ತವೆ.

ತಾ॥ ತಾನಾಗಿ ಬಂದ ಸುಖವನ್ನಾಗಲಿ, ದುಃಖವನ್ನಾಗಲಿ ಅನುಭವಿಸಲೇ ಬೇಕು. ಆ ಸುಖದುಃಖಗಳು ಗಾಡಿಯ ಚಕ್ರವು ಉರುಳುವಂತೆ ಕ್ರಮವಾಗಿ ಒಂದಾದ ಮೇಲೆ ಮತ್ತೊಂದು ಬರುತ್ತಿರುತ್ತವೆ.

೨೨. ಅ॥ ಉತ್ಸಾಹಸಂಪನ್ನಂ = ಉತ್ಸಾಹದಿಂದ ಕೂಡಿರುವ, ಅದೀರ್ಘಸೂತ್ರಂ = ಶೀಘ್ರವಾಗಿ ಕೆಲಸ ಮಾಡುವ, ಕ್ರಿಯಾವಿಧಿಜ್ಞಂ = ಕೆಲಸದ ಕ್ರಮವನ್ನರಿತ, ವ್ಯಸನೇಷು = ಜೂಜು ಮೊದಲಾದ ಚಟಗಳಲ್ಲಿ, ಅಸಕ್ತಂ = ಸಂಬಂಧಗೊಳ್ಳದ, ಶೂರಂ = ಪರಾಕ್ರಮವುಳ್ಳ, ಕೃತಜ್ಞಂ = ಮಾಡಿದ್ದನ್ನು ತಿಳಿಯುವ, ದೃಢಸೌಹೃದಂ = ಸ್ಥಿರವಾದ ಸ್ನೇಹವುಳ್ಳ ಮನುಷ್ಯನನ್ನು, ಲಕ್ಷ್ಮೀಃ = ಸಂಪತ್ತು, ನಿವಾಸಹೇತೋಃ = ವಾಸಮಾಡುವುದಕ್ಕಾಗಿ, ಸ್ವಯಂ ಯಾತಿ = ತಾನಾಗಿ ಹೋಗುವಳು.

ತಾ॥ ಉತ್ಸಾಹಿಯೂ, ಬೇಗನೆ ಕೆಲಸಮಾಡುವವನೂ, ಕೆಲಸದ ರೀತಿಯನ್ನು ತಿಳಿದವನೂ, ಜೂಜು ಮೊದಲಾದ ಚಟವಿಲ್ಲದವನೂ, ಶಕ್ತಿವಂತನೂ, ಕೃತಜ್ಞನೂ, ಸ್ಥಿರವಾದ ಸ್ನೇಹವುಳ್ಳವನೂ ಆದ ಮನುಷ್ಯನಿಗೆ ಸಂಪತ್ತು ತಾನಾಗಿ ಬಂದು ಸೇರುವುದು.

७३. विशेषतश्च ।

विनाप्यर्थैर्वीरः स्पृशति बहुमानोन्नतिपदं
समायुक्तोऽप्यर्थैः परिभवपदं याति कृपणः ।
स्वभावादुद्भूतां गुणसमुदयावाप्तिविषयां
द्युतिं सैंहीं किं श्वा धृतकनकमालोऽपि लभते ॥

---

೭೩. ಅ॥ ವಿಶೇಷತಃ ಚ = ಅತಿಶಯದಿಂದ, ವೀರಃ = ಪರಾಕ್ರಮ ಶಾಲಿಯು, ಅರ್ಥೈಃ ವಿನಾ ಅಪಿ = ಹಣವಿಲ್ಲದಿದ್ದರೂ, ಬಹುಮಾನ= ಬಹುಮಾನದ, ಉನ್ನತಿಪದಂ = ಉನ್ನತ ಸ್ಥಾನವನ್ನು, ಸ್ಪೃಶತಿ= ಮುಟ್ಟುತ್ತಾನೆ. ಕೃಪಣಃ=ಜಿಪುಣನು, ಅರ್ಥೈಃ=ಹಣದಿಂದ, ಸಮಾ- ಯುಕ್ತಃ ಅಪಿ=ಕೂಡಿದ್ದರೂ, ಪರಿಭವಪದಂ=ಅವಮಾನದ ವಿಷಯ ವನ್ನು, ಯಾತಿ=ಹೊಂದುತ್ತಾನೆ. ಶ್ವಾ=ನಾಯಿಯು, ಧೃತ=ಧರಿಸಲ್ಪಟ್ಟ, ಕನಕಮಾಲಃ ಅಪಿ = ಚಿನ್ನದ ಸರವುಳ್ಳದ್ದಾದರೂ, ಸ್ವಭಾವಾತ್ = ಸ್ವಭಾವದಿಂದ, ಉದ್ಭೂತಾಂ=ಉಂಟಾದ, ಗುಣ=ಗುಣಗಳ, ಸಮುದಯ = ಸಮೂಹದ, ಆಪ್ತಿವಿಷಯಾಂ = ಹೊಂದುವುದಕ್ಕೆ ವಿಷಯವಾದ, ಸೈಂಹೀಂ=ಸಿಂಹದ, ದ್ಯುತಿಂ=ಕಾಂತಿಯನ್ನು, ಲಭತೇ ಕಿಂ=ಹೊಂದುತ್ತ ದೇನು.

ತಾ॥ ಸಿಂಹವು ತನ್ನ ಪರಾಕ್ರಮದ ಸ್ವಭಾವದಿಂದಲೇ ಅತಿಶಯ ಕಾಂತಿ ಯನ್ನು ಪಡೆಯುವುದು. ಶಕ್ತಿಯಿಲ್ಲದ ನಾಯಿಯು ಚಿನ್ನದ ಸರವನ್ನು ಕುತ್ತಿಗೆಯಲ್ಲಿ ಧರಿಸಿದರೂ ಅಂತಹ ಕಾಂತಿಯನ್ನು ಪಡೆಯುವುದಿಲ್ಲ. ಹಾಗೆಯೇ ಶೂರನು ಹಣವಿಲ್ಲದವನಾದರೂ ಅತಿಶಯ ಬಹುಮಾನವನ್ನು ಹೊಂದುವನು. ಜಿಪುಣನು ಹಣಗಾರನಾಗಿದ್ದರೂ ಅವಮಾನಕ್ಕೀಡಾಗು ವನು. ಅವನನ್ನು ಯಾರೂ ಗೌರವಿಸುವುದಿಲ್ಲ.

೨೪. धनवानिति हि मदो मे
किं गतविभवो विषादमुपयामि ।
करनिहतकन्दुकसमाः
पातोत्पाता मनुष्याणाम् ॥ १७६ ॥

೨೫. अपरं च ।
अभ्रच्छाया खलप्रीतिर्नवसस्यानि योषितः ।
किञ्चित्कालोपभोग्यानि यौवनानि धनानि च ॥१७७॥

---

೨೪. ಅ॥ ಮೇ=ನನಗೆ, ಧನವಾನ್ ಇತಿ=ಹಣವುಳ್ಳವನೆಂದು, ಮದಃ ಕಿಂ=ಅಹಂಕಾರವೇನು ? ಗತವಿಭವಃ=ಐಶ್ವರ್ಯವಿಲ್ಲದ ನಾನು, ವಿಷಾದಂ=ವ್ಯಥೆಯನ್ನು, ಉಪಯಾಮಿ ಕಿಂ=ಹೊಂದುತ್ತೇನೊ ? ಮನುಷ್ಯಾಣಾಂ=ಮನುಷ್ಯರ, ಪಾತೋತ್ಪಾತಾಃ=ಅವನತಿ ಮತ್ತು ಉನ್ನತಿಗಳು, ಕರನಿಹತ=ಕೈಯಿಂದ ಹೊಡೆಯಲ್ಪಟ್ಟ, ಕಂದುಕಸಮಾಃ=ಚಂಡಿಗೆಸಮಾನವಾದುವು.

ತಾ॥ ನಾನು ಹಣಗಾರನೆಂದು ಅಹಂಕಾರ ಪಡುವುದಿಲ್ಲ. ಹಣವಿಲ್ಲದಿರುವಾಗ ವ್ಯಥೆಪಡುವುದಿಲ್ಲ. ಮನುಷ್ಯರ ಅವನತಿ ಮತ್ತು ಉನ್ನತಿಗಳು ಕೈಯಿಂದ ಎಸೆದ ಚಂಡಿನಂತಿರುವುವು.

೨೫. ಅ॥ ಅಭ್ರಚ್ಛಾಯಾ=ಮೋಡದ ನೆರಳು, ಖಲಪ್ರೀತಿಃ=ದುಷ್ಟರ ಸ್ನೇಹ, ನವಸಸ್ಯಾನಿ = ಹೊಸ ಸಸಿಗಳು, ಯೋಷಿತಃ = ಹೆಂಗಸರು, ಯೌವನಾನಿ=ಯೌವನ, ಧನಾನಿ=ಹಣಗಳು ಇವುಗಳು, ಕಿಂಚಿತ್ಕಾಲ=ಕೆಲವು ಸಮಯ, ಉಪಭೋಗ್ಯಾನಿ=ಅನುಭವಿಸಲು ಯೋಗ್ಯವಾದುವು.

ತಾ॥ ಮೋಡದ ನೆರಳು, ದುಷ್ಟನ ಸ್ನೇಹ, ಹೊಸ ಸಸಿಗಳು, ಹೆಂಗಸರು, ಯೌವನ, ಹಣ ಈ ಆರು ಕೆಲವು ಕಾಲ ಮಾತ್ರ ಅನುಭವಕ್ಕೆ ವಿಷಯವಾಗಿರುವುವು.

Funding: Tattva Heritage Foundation,Kolkata. Digitization: eGangotri.



೨೭. वृत्त्यर्थं नातिचेष्टेत सा हि धात्रैव निर्मिता ।
गर्भादुत्पतिते जन्तौ मातुः प्रस्रवतः स्तनौ ॥ १७८ ॥

೨೮. अपि च सखे,
येन शुक्लीकृता हंसाः शुकाश्च हरितीकृताः ।
मयूराश्चित्रिता येन स ते वृत्तिं विधास्यति ॥ १७९ ॥

---

೨೭. ಅ॥ ವೃತ್ತ್ಯರ್ಥಂ=ಜೀವನಕ್ಕಾಗಿ, ನ ಅತಿಚೇಷ್ಟೇತ=ಅತ್ಯಂತ ತವಕಗೊಳ್ಳಬಾರದು. ಸಾ=ಆ ಜೀವನವು, ಧಾತ್ರಾ ಏವ=ಬ್ರಹ್ಮನಿಂದಲೇ, ನಿರ್ಮಿತಾ=ಸೃಷ್ಟಿಸಲ್ಪಟ್ಟಿದೆ. ಜಂತೌ=ಪ್ರಾಣಿಯು, ಗರ್ಭಾತ್=ಗರ್ಭ ದಿಂದ, ಉತ್ಪತಿತೇ=ಮೇಲಕ್ಕೆ ಬರಲು, ಮಾತುಃ=ತಾಯಿಯ, ಸ್ತನೌ= ಕುಚಗಳು, ಪ್ರಸ್ರವತಃ=ಸ್ರವಿಸುತ್ತವೆ.

ತಾ॥ ಮನುಷ್ಯನ ಜೀವನವನ್ನು ಹುಟ್ಟುವಾಗಲೆ ಬ್ರಹ್ಮನು ಕಲ್ಪಿಸಿರು ವುದರಿಂದ ಅದಕ್ಕಾಗಿ ಹೆಚ್ಚು ತವಕಪಡಬಾರದು. ಪ್ರಾಣಿಯು ಹುಟ್ಟಿದ ಕೂಡಲೆ ಅದಕ್ಕೆ ಬೇಕಾಗುವ ಹಾಲು ತಾಯಿಯ ಮೊಲೆಯಿಂದ ಸ್ರವಿಸುವಂತೆ ಬ್ರಹ್ಮನು ಮಾಡಿರುತ್ತಾನೆ.

೨೮. ಅ॥ ಅಪಿ ಚ ಸಖೇ=ಮತ್ತು ಮಿತ್ರನೆ, ಯೇನ=ಯಾವ ಬ್ರಹ್ಮ ನಿಂದ, ಹಂಸಾಃ=ಹಂಸಗಳು,ಶುಕ್ಲೀಕೃತಾಃ=ಬೆಳ್ಳಗೆ ಮಾಡಲ್ಪಟ್ಟಿರುವುವೊ, ಚ=ಮತ್ತು ಶುಕಾಃ=ಗಿಳಿಗಳು, ಹರಿತೀಕೃತಾಃ=ಹಸುರಾಗಿ ಮಾಡಲ್ಪಟ್ಟಿ ರುವುವೊ, ಯೇನ=ಯಾವನಿಂದ, ಮಯೂರಾಃ=ನವಿಲುಗಳು, ಚಿತ್ರಿತಾಃ =ನಾನಾ ಬಣ್ಣಗಳಾಗಿ ಮಾಡಲ್ಪಟ್ಟಿರುವುವೊ. ಸಃ=ಆ ಬ್ರಹ್ಮನು, ತೇ= ನಿನಗೆ, ವೃತ್ತಿಂ=ಜೀವನವನ್ನು, ವಿಧಾಸ್ಯತಿ=ಸೃಷ್ಟಿ ಮಾಡುವನು.

ತಾ॥ ಬ್ರಹ್ಮನು ಹಂಸಗಳನ್ನು ಬೆಳ್ಳಗಾದುವುಗಳನ್ನಾಗಿಯೂ, ಗಿಳಿಗಳನ್ನು ಹಸುರಾದುವುಗಳನ್ನಾಗಿಯೂ, ನವಿಲುಗಳನ್ನು ನಾನಾಬಣ್ಣದವುಗಳನ್ನಾ ಗಿಯೂ ಸೃಷ್ಟಿಸಿರುತ್ತಾನೆ. ಅವನೇ ಪ್ರಾಣಿಗಳಿಗೆ ಜೀವನವನ್ನೂ ಸೃಷ್ಟಿಸಿ ರುತ್ತಾನೆ.

೨೮. अपरं च सतां रहस्यं शृणु मित्र ।

೨೯. **जनयन्त्यर्जने दुःखं तापयन्ति विपत्तिषु ।**
**मोहयन्ति च सम्पत्तौ कथमर्थाः सुखावहाः ॥ १८० ॥**

೩೦. अपरं च ।

**धर्मार्थं यस्य वित्तेहा वरं तस्य निरीहता ।**
**प्रक्षालनाद्धि पङ्कस्य दूरादस्पर्शनं वरम् ॥ १८१ ॥**

---

೨೮. ಅ॥ ಮಿತ್ರ = ಸ್ನೇಹಿತನೆ! ಸತಾಂ = ಸಜ್ಜನರ, ಅಪರಂ = ಮತ್ತೊಂದು, ರಹಸ್ಯಂ ಚ = ಗುಟ್ಟನ್ನೂ, ಶೃಣು = ಕೇಳು.

೨೯. ಅ॥ ಅರ್ಜನೇ = ಸಂಪಾದನೆಯಲ್ಲಿ, ದುಃಖಂ = ದುಃಖವನ್ನು, ಜನಯಂತಿ = ಉಂಟುಮಾಡುತ್ತವೆ. ವಿಪತ್ತಿಷು = ಆಪತ್ತುಗಳಲ್ಲಿ, ತಾಪಯಂತಿ = ವ್ಯಥೆಗೊಳಿಸುತ್ತವೆ. ಚ = ಮತ್ತು, ಸಂಪತ್ತೌ = ಐಶ್ವರ್ಯದ ಸಮೃದ್ಧಿಯಲ್ಲಿ, ಮೋಹಯಂತಿ = ಭ್ರಾಂತಿಗೊಳಿಸುತ್ತವೆ. ಅರ್ಥಾಃ = ಹಣಗಳು, ಕಥಂ = ಹೇಗೆ, ಸುಖಾವಹಾಃ = ಸುಖವನ್ನುಂಟುಮಾಡುವುವು.

ತಾ॥ ಹಣವು ಸಂಪಾದಿಸುವಾಗ ಕಷ್ಟವನ್ನುಂಟುಮಾಡುವುದು. ಆಪತ್ಕಾಲದಲ್ಲಿ ಅದಿಲ್ಲದಿರುವುದರಿಂದ ದುಃಖವುಂಟಾಗುವುದು. ಐಶ್ವರ್ಯವು ಹೆಚ್ಚಿರುವಾಗ ಭ್ರಾಂತಿಯಿಂದ ಅಹಂಕಾರವುಂಟಾಗುವುದು. ಆದ್ದರಿಂದ ಹಣದಿಂದ ಸುಖವುಂಟಾಗುವುದೆಂಬುದು ಕೇವಲ ಭ್ರಾಂತಿಯೇ.

೩೦. ಅ॥ ಯಸ್ಯ = ಯಾವನಿಗೆ, ಧರ್ಮಾರ್ಥಂ = ಧರ್ಮಕ್ಕಾಗಿ, ವಿತ್ತೇಹಾ = ಹಣದ ಆಶೆಯುಂಟಾಗುವುದೊ; ತಸ್ಯ = ಅವನಿಗೆ, ನಿರೀಹತಾ = ಆಶೆಯಿಲ್ಲದಿರುವಿಕೆಯೇ, ವರಂ = ಉತ್ತಮವಾದುದು. ಪಂಕಸ್ಯ = ಕೆಸರನ್ನು, ಪ್ರಕ್ಷಾಲನಾತ್ = ತೊಳೆದುಕೊಳ್ಳುವುದಕ್ಕಿಂತ, ದೂರಾತ್ = ದೂರದಿಂದ, ಅಸ್ಪರ್ಶನಂ = ಮುಟ್ಟದಿರುವಿಕೆಯು, ವರಂ = ಶ್ರೇಷ್ಠವಾದುದು.

ತಾ॥ ಕೆಸರನ್ನು ಮುಟ್ಟಿ ಅದನ್ನು ತೊಳೆದುಕೊಳ್ಳುವುದಕ್ಕಿಂತ ದೂರದಲ್ಲಿದ್ದು ಅದನ್ನು ಮುಟ್ಟದಿರುವುದೇ ಲೇಸು. ಹಾಗೆಯೇ ಹಣವನ್ನು

೩೧. यथा ह्यामिषमाकाशे पक्षिभिः श्वापदैर्भुवि ।
भक्ष्यते सलिले नक्रैस्तथा सर्वत्र वित्तवान् ॥ १८२ ॥

೩೨. राजतः सलिलादग्नेश्चोरतः स्वजनादपि ।
भयमर्थवतां नित्यं मृत्योः प्राणभृतामिव ॥ १८३ ॥

---

ಅಪೇಕ್ಷಿಸಿ ಸಂಪಾದಿಸಿ ಅದನ್ನು ಧರ್ಮಮಾಡುವುದಕ್ಕಿಂತ ಆ ಹಣವನ್ನು ಅಪೇಕ್ಷಿಸದೇ ಇರುವುದೇ ಲೇಸು

೩೧. ಅ॥ ಯಥಾ=ಹೇಗೆ, ಆಮಿಷಂ=ತಿನ್ನುವ ವಸ್ತುವು, ಆಕಾಶೇ=ಆಕಾಶದಲ್ಲಿ, ಪಕ್ಷಿಭಿಃ=ಹಕ್ಕಿಗಳಿಂದಲೂ, ಭುವಿ=ಭೂಮಿಯಲ್ಲಿ, ಶ್ವಾಪದೈಃ =ಹುಲಿ ಮೊದಲಾದುವುಗಳಿಂದಲೂ, ಸಲಿಲೇ=ನೀರಿನಲ್ಲಿ, ನಕ್ರೈಃ=ಮೊಸಳೆಗಳಿಂದಲೂ, ಭಕ್ಷ್ಯತೇ=ತಿನ್ನಲ್ಪಡುತ್ತದೊ; ತಥಾ=ಹಾಗೆ, ವಿತ್ತ-ವಾನ್=ಹಣಗಾರನು, ಸರ್ವತ್ರ=ಎಲ್ಲೆಡೆಯಲ್ಲಿಯೂ, (ಹಿಂಸೆ ಮಾಡಲ್ಪಡುತ್ತಾನೆ).

ತಾ॥ ತಿನ್ನುವ ವಸ್ತುವು ಆಕಾಶದಲ್ಲಿದ್ದರೆ ಅದನ್ನು ಹಕ್ಕಿಗಳು ತಿನ್ನುವುವು. ಭೂಮಿಯಲ್ಲಿದ್ದರೆ ಹುಲಿ ಮೊದಲಾದುವು ತಿನ್ನುವುವು. ನೀರಿನಲ್ಲಿದ್ದರೆ ಮೊಸಳೆಗಳು ತಿನ್ನುವುವು. ಹಾಗೆಯೇ ಹಣಗಾರನನ್ನು ಎಲ್ಲೆಡೆಯಲ್ಲಿಯೂ ಜನರು ಪೀಡಿಸುವರು.

೩೨. ಅ॥ ಪ್ರಾಣಭೃತಾಂ=ಪ್ರಾಣಿಗಳಿಗೆ, ಮೃತ್ಯೋಃ=ಸಾವಿನಿಂದ, ಭಯಂ ಇವ=ಹೆದರಿಕೆಯಂತೆ, ಅರ್ಥವತಾಂ=ಹಣವುಳ್ಳವರಿಗೆ, ನಿತ್ಯಂ=ಯಾವಾಗಲೂ, ರಾಜತಃ=ರಾಜನಿಂದ, ಸಲಿಲಾತ್=ನೀರಿನಿಂದ, ಅಗ್ನೇಃ=ಬೆಂಕಿಯಿಂದ, ಚೋರತಃ=ಕಳ್ಳನಿಂದ, ಸ್ವಜನಾತ್ ಅಪಿ=ಬಂಧುವಿನಿಂದಲೂ, ಭಯಂ=ಹೆದರಿಕೆಯುಂಟಾಗುವುದು.

ತಾ॥ ಪ್ರಾಣಿಗಳಿಗೆ ಯಾವಾಗಲೂ ಸಾವಿನಿಂದ ಹೆದರಿಕೆಯಿರುವುದು. ಹಾಗೆಯೇ ಹಣಗಾರನಿಗೆ ದೊರೆ, ನೀರು, ಬೆಂಕಿ, ಕಳ್ಳ, ಬಂಧುಜನ ಇವರಿಂದ ಯಾವಾಗ ಏನಾಗುವುದೊ ಎಂದು ಯಾವಾಗಲೂ ಭಯವುಂಟಾಗುವುದು.

३३. तथा हि ।

जन्मनि क्लेशबहुले किं नु दुःखमतः परम् ।
इच्छासम्पद्यतो नास्ति यच्चेच्छा न निवर्तते ॥ १८४ ॥

३४. अन्यच्च भ्रातः शृणु ।

धनं तावदसुलभं लब्धं कृच्छ्रेण रक्ष्यते ।
लब्धनाशो यथा मृत्युस्तस्मादेतन्न चिन्तयेत् ॥ १८५ ॥

---

೩೩ ಅ॥ ಕ್ಲೇಶಬಹುಲೇ=ಹೆಚ್ಚಾದ ಕಷ್ಟವುಳ್ಳ, ಜನ್ಮನಿ=ಹುಟ್ಟಿನಲ್ಲಿ, ಯತಃ = ಯಾವ ಕಾರಣದಿಂದ, ಇಚ್ಛಾಸಂಪತ್ = ಅಪೇಕ್ಷಿಸಿದಷ್ಟು ಐಶ್ವರ್ಯವು, ನಾಸ್ತಿ=ಇಲ್ಲವೊ. ಯತ್ =ಯಾವ ಕಾರಣದಿಂದ, ಇಚ್ಛಾ =ಅಪೇಕ್ಷೆಯು, ನ ನಿವರ್ತತೇ=ಹಿಂದಿರುಗುವುದಿಲ್ಲವೊ, ಅತಃ ಪರಂ= ಇದಕ್ಕಿಂತ ಹೆಚ್ಚಾದ, ದುಃಖಂ=ವ್ಯಥೆಯು, ಕಿಂ ನು =ಯಾವುದು ?

ತಾ॥ ಈ ಮನುಷ್ಯ ಜನ್ಮದಲ್ಲಿ ಅತ್ಯಂತ ಕಷ್ಟಗಳು ಒದಗುವುವು. ಇದರಲ್ಲಿ ಅಪೇಕ್ಷಿಸಿದಷ್ಟು ಸಂಪತ್ತು ಒದಗುವುದಿಲ್ಲ. ಸಂಪತ್ತಿನ ಅಪೇಕ್ಷೆಯೂ ಕಡಮೆಯಾಗುವುದಿಲ್ಲ. ಇದಕ್ಕಿಂತ ಹೆಚ್ಚಾದ ದುಃಖವೇನಿದೆ.

೩೪. ಅ॥ ಭ್ರಾತಃ=ಸಹೋದರನೆ, ಅನ್ಯತ್ ಚ=ಬೇರೆ ವಿಷಯವನ್ನೂ, ಶೃಣು=ಕೇಳು. ಧನಂ ತಾವತ್=ಹಣವು, ಅಸುಲಭಂ = ಸುಖವಾಗಿ ಸಿಕ್ಕುವುದಿಲ್ಲ. ಲಬ್ಧಂ=ಹೊಂದಲ್ಪಟ್ಟ ಹಣವು, ಕೃಚ್ಛ್ರೇಣ=ಕಷ್ಟದಿಂದ, ರಕ್ಷ್ಯತೇ=ಕಾಪಾಡಲ್ಪಡುತ್ತದೆ. ಲಬ್ಧನಾಶಃ = ಹೊಂದಲ್ಪಟ್ಟ ಹಣದ ನಾಶವು, ಯಥಾ ಮೃತ್ಯುಃ=ಸಾವಿನಂತೆ. ತಸ್ಮಾತ್=ಆದ್ದರಿಂದ, ಏತತ್ =ಈ ಹಣವನ್ನು, ನ ಚಿಂತಯೇತ್=ಆಲೋಚಿಸಕೂಡದು.

ತಾ॥ ಹಣವು ಸುಖವಾಗಿ ದೊರೆಯುವುದಿಲ್ಲ. ದೊರೆತರೂ ಅದನ್ನು ರಕ್ಷಿಸುವುದು ಕಷ್ಟ. ಸಿಕ್ಕಿದ ಹಣವು ನಾಶವಾದರೆ ಸಾವಿನಂತೆ ದುಃಖವಾಗುವುದು. ಆದ್ದರಿಂದ ಹಣವನ್ನು ಅಪೇಕ್ಷಿಸಕೂಡದು.

೩೫. तृष्णां चेह परित्यज्य को दरिद्रः क ईश्वरः ।
तस्याश्चेत्प्रसरो दत्तो दास्यं च शिरसि स्थितम् ॥ १८६ ॥

೩೬. अपरं च ।
यद्यदेव हि वाञ्छेत ततो वाञ्छा प्रवर्तते ।
प्राप्त एवार्थतः सोऽर्थो यतो वाञ्छा निवर्तते ॥ १८७ ॥

೩೭. किं बहुना मम पक्षपातेन । मयैव सहात्र कालो नीयताम् । यतः ।

---

೩೫. ಅ॥ ಇಹ = ಈ ಪ್ರಪಂಚದಲ್ಲಿ, ತೃಷ್ಣಾಂ = ಆಶೆಯನ್ನು, ಪರಿತ್ಯಜ್ಯ = ಬಿಟ್ಟು, ಕಃ = ಯಾವನು, ದರಿದ್ರಃ = ಬಡವನು. ಕಃ = ಯಾವನು, ಈಶ್ವರಃ = ಹಣಗಾರನು. ತಸ್ಯಾಃ = ಆ ಆಶೆಗೆ, ಪ್ರಸರಃ = ಹರಡುವಿಕೆಯು, ದತ್ತಃ ಚೇತ್ = ಕೊಡಲ್ಪಟ್ಟದ್ದೇ ಆದರೆ, ದಾಸ್ಯಂ ಚ = ಸೇವಕತ್ವವೂ, ಶಿರಸಿ = ತಲೆಯ ಮೇಲೆ, ಸ್ಥಿತಂ = ನಿಂತಿರುವುದು.

ತಾ॥ ಆಶೆಯೇ ಇವನು ಬಡವ, ಇವನು ಹಣಗಾರ ಎಂಬುದಕ್ಕೆ ಕಾರಣವಾದುದು. ಇದನ್ನು ಬಿಟ್ಟಲ್ಲಿ ಬಡವನಾರು? ಹಣಗಾರನಾರು? ಆ ಆಶೆಗೆ ಹೆಚ್ಚಲು ಅವಕಾಶಕೊಟ್ಟರೆ (ಅತ್ಯಾಶೆಯುಳ್ಳವನಾದರೆ) ಹಣವನ್ನು ಗಳಿಸಲು ಇನ್ನೊಬ್ಬನಿಗೆ ಸೇವಕನಾಗಬೇಕಾಗುವುದು.

೩೬. ಅ॥ ಯತ್ ಯತ್ = ಯಾವಯಾವುದನ್ನು, ವಾಂಛೇತ = ಅಪೇಕ್ಷಿಸಿಯಾನೋ, ತತಃ = ಅದರಿಂದಲೇ, ವಾಂಛಾ = ಆಶೆಯು, ಪ್ರವರ್ತತೇ = ಹೆಚ್ಚಾಗಿ ಉಂಟಾಗುತ್ತದೆ. ಸಃ = ಆ, ಅರ್ಥಃ = ಹಣವು, ಅರ್ಥತಃ ಏವ = ಹಣದಿಂದಲೇ, ಪ್ರಾಪ್ತಃ = ಉಂಟಾಗಿರುವುದು. ಯತಃ = ಯಾವುದರಿಂದ, ವಾಂಛಾ = ಅಪೇಕ್ಷೆಯು, ನಿವರ್ತತೇ = ಹೋಗುವುದೊ.

ತಾ॥ ಹಣವನ್ನು ಅಪೇಕ್ಷಿಸಿದಷ್ಟು ಆಶೆಯು ಹೆಚ್ಚುತ್ತಿರುತ್ತದೆ. ಒಂದು ಹಣದ ಬಲದಿಂದಲೇ ಆ ಅಪೇಕ್ಷಿಸಿದ ಹಣವು ಲಭಿಸುವುದು. ಆ ಹಣವು ಒದಗಿದ ಕೂಡಲೆ ಆಶೆಯು ಇಂಗಿ ಹೋಗುವುದು.

೩೭ ಅ॥ ಕಿಂ ಬಹುನಾ = ಹೆಚ್ಚಿನ ಮಾತಿನಿಂದೇನು, ಮಮ = ನನ್ನ,

३८. **आमरणान्ताः प्रणयाः कोपास्तत्क्षणभङ्गुराः ।**
**परित्यागाश्च निस्सङ्गा भवन्ति हि महात्मनाम्' ॥१८८॥**

३९. इति श्रुत्वा लघुपतनको ब्रूते–'धन्योऽसि मन्थर, सर्वथा श्लाघ्य-गुणोऽसि । यतः ।

४०. **सन्त एव सतां नित्यमापदुद्धरणक्षमाः ।**
**गजानां पङ्कमग्नानां गजा एव धुरन्धराः ॥ १८९ ॥**

---

ಪಕ್ಷಪಾತೇನ = ಸ್ನೇಹದಿಂದ, ಮಯಾ ಏವ ಸಹ = ನನ್ನೊಡನೆಯೇ, ಅತ್ರ = ಇಲ್ಲಿ, ಕಾಲಃ = ಸಮಯವು, ನೀಯತಾಂ = ಕಳೆಯಲ್ಪಡಲಿ. ಯತಃ = ಯಾವ ಕಾರಣದಿಂದ.

೩೮. ಅ|| ಮಹಾತ್ಮನಾಂ = ದೊಡ್ಡವರ, ಪ್ರಣಯಾಃ ಸ್ನೇಹಗಳು, ಆಮರಣಾಂತಾಃ = ಸಾಯುವವರೆಗೆ ಇರುವುವು. ಕೋಪಾಃ = ಕೋಪಗಳು, ಕ್ಷಣಭಂಗುರಾಃ = ಸ್ವಲ್ಪ ಹೊತ್ತಿನಲ್ಲಿಯೇ ಅಡಗಿಹೋಗುವುವು, ಪರಿತ್ಯಾಗಾಃ ಚ = ಬಿಡುವಿಕೆಗಳು, ನಿಸ್ಸಂಗಾಃ = ಸಂಬಂಧವಿಲ್ಲದುವು, ಭವಂತಿ ಹಿ = ಆಗುವುವು.

ತಾ|| ಮಹಾತ್ಮರು ಸ್ನೇಹಮಾಡಿದರೆ ಅದು ಸಾಯುವವರೆಗೂ ಇರುವುದು. ಅವರ ಕೋಪವು ಕ್ಷಣಕಾಲದಲ್ಲಿ ಅಡಗಿಹೋಗುವುದು. ಅವರು ಯಾವುದನ್ನಾದರೂ ತ್ಯಜಿಸಿದಲ್ಲಿ ಅದನ್ನು ತಿರುಗಿ ಸ್ವೀಕರಿಸಲು ಬಯಸುವುದಿಲ್ಲ.

೩೯. ಅ|| ಇತಿ = ಹೀಗೆಂದು, ಶ್ರುತ್ವಾ = ಕೇಳಿ, ಲಘುಪತನಕಃ = ಲಘುಪತನಕನು, ಬ್ರೂತೇ = ಹೇಳುತ್ತಾನೆ. 'ಮಂಥರ = ಮಂಥರನೆ, ಧನ್ಯಃ ಅಸಿ = ಪುಣ್ಯವಂತನಾಗಿರುವಿ. ಸರ್ವಥಾ = ಎಲ್ಲ ವಿಧದಿಂದಲೂ, ಶ್ಲಾಘ್ಯ-ಗುಣಃ = ಹೊಗಳಲು ಯೋಗ್ಯವಾದ ಗುಣವುಳ್ಳವನು. ಅಸಿ = ಆಗಿದ್ದೀ. ಯತಃ = ಯಾವ ಕಾರಣದಿಂದ.

೪೦. ಅ|| ಸಂತಃ ಏವ = ಸಜ್ಜನರೇ, ಸತಾಂ = ಸಜ್ಜನರ, ನಿತ್ಯಂ =

३७. तृष्णां चेह परित्यज्य को दरिद्रः क ईश्वरः ।
तस्याश्चेत्प्रसरो दत्तो दास्यं च शिरसि स्थितम् ॥ १८६ ॥

३८. अपरं च ।
यद्यदेव हि वाञ्छेत ततो वाञ्छा प्रवर्तते ।
प्राप्त एवार्थतः सोऽर्थो यतो वाञ्छा निवर्तते ॥ १८७ ॥

३८. किं बहुना मम पक्षपातेन । मयैव सहात्र कालो नीयताम् । यतः ।

---

೩೭. ಅ॥ ಇಹ = ಈ ಪ್ರಪಂಚದಲ್ಲಿ, ತೃಷ್ಣಾಂ = ಆಶೆಯನ್ನು, ಪರಿತ್ಯಜ್ಯ = ಬಿಟ್ಟು, ಕಃ = ಯಾವನು, ದರಿದ್ರಃ = ಬಡವನು. ಕಃ = ಯಾವನು, ಈಶ್ವರಃ = ಹಣಗಾರನು. ತಸ್ಯಾಃ = ಆ ಆಶೆಗೆ, ಪ್ರಸರಃ = ಹರಡುವಿಕೆಯು, ದತ್ತಃ ಚೇತ್ = ಕೊಡಲ್ಪಟ್ಟದ್ದೇ ಆದರೆ, ದಾಸ್ಯಂ ಚ = ಸೇವಕತ್ವವೂ, ಶಿರಸಿ = ತಲೆಯ ಮೇಲೆ, ಸ್ಥಿತಂ = ನಿಂತಿರುವುದು.

ತಾ॥ ಆಶೆಯೇ ಇವನು ಬಡವ, ಇವನು ಹಣಗಾರ ಎಂಬುದಕ್ಕೆ ಕಾರಣವಾದುದು. ಇದನ್ನು ಬಿಟ್ಟಲ್ಲಿ ಬಡವನಾರು ? ಹಣಗಾರನಾರು ? ಆ ಆಶೆಗೆ ಹೆಚ್ಚಲು ಅವಕಾಶಕೊಟ್ಟರೆ (ಅತ್ಯಾಶೆಯುಳ್ಳವನಾದರೆ) ಹಣವನ್ನು ಗಳಿಸಲು ಇನ್ನೊಬ್ಬನಿಗೆ ಸೇವಕನಾಗಬೇಕಾಗುವುದು.

೩೮. ಅ॥ ಯತ್ ಯತ್ = ಯಾವಯಾವುದನ್ನು, ವಾಂಛೇತ = ಅಪೇಕ್ಷಿಸಿಯಾನೋ, ತತಃ = ಅದರಿಂದಲೇ, ವಾಂಛಾ = ಆಶೆಯು, ಪ್ರವರ್ತತೇ = ಹೆಚ್ಚಾಗಿ ಉಂಟಾಗುತ್ತದೆ. ಸಃ = ಆ, ಅರ್ಥಃ = ಹಣವು, ಅರ್ಥತಃ ಏವ = ಹಣದಿಂದಲೇ, ಪ್ರಾಪ್ತಃ = ಉಂಟಾಗಿರುವುದು. ಯತಃ = ಯಾವುದರಿಂದ, ವಾಂಛಾ = ಅಪೇಕ್ಷೆಯು, ನಿವರ್ತತೇ = ಹೋಗುವುದೊ.

ತಾ॥ ಹಣವನ್ನು ಅಪೇಕ್ಷಿಸಿದಷ್ಟು ಆಶೆಯು ಹೆಚ್ಚುತ್ತಿರುತ್ತದೆ. ಒಂದು ಹಣದ ಬಲದಿಂದಲೇ ಆ ಅಪೇಕ್ಷಿಸಿದ ಹಣವು ಲಭಿಸುವುದು. ಆ ಹಣವು ಒದಗಿದ ಕೂಡಲೆ ಆಶೆಯು ಇಂಗಿ ಹೋಗುವುದು.

೩೮ ಅ॥ ಕಿಂ ಬಹುನಾ = ಹೆಚ್ಚಿನ ಮಾತಿನಿಂದೇನು, ಮಮ = ನನ್ನ,

३८. **आमरणान्ताः प्रणयाः कोपास्तत्क्षणभङ्गुराः ।**
**परित्यागाश्च निस्सङ्गा भवन्ति हि महात्मनाम्' ॥१८८॥**

३९. इति श्रुत्वा लघुपतनको ब्रूते–'धन्योऽसि मन्थर, सर्वथा श्लाघ्य-गुणोऽसि । यतः ।

४०. **सन्त एव सतां नित्यमापदुद्धरणक्षमाः ।**
**गजानां पङ्कमग्नानां गजा एव धुरन्धराः ॥ १८९ ॥**

---

ಪಕ್ಷಪಾತೇನ=ಸ್ನೇಹದಿಂದ, ಮಯಾ ಏವ ಸಹ=ನನ್ನೊಡನೆಯೇ, ಅತ್ರ =ಇಲ್ಲಿ, ಕಾಲಃ=ಸಮಯವು, ನೀಯತಾಂ=ಕಳೆಯಲ್ಪಡಲಿ. ಯತಃ= ಯಾವ ಕಾರಣದಿಂದ.

೩೮. ಅ॥ ಮಹಾತ್ಮನಾಂ = ದೊಡ್ಡವರ, ಪ್ರಣಯಾಃ ಸ್ನೇಹಗಳು, ಆಮರಣಾಂತಾಃ=ಸಾಯುವವರೆಗೆ ಇರುವವು. ಕೋಪಾಃ=ಕೋಪಗಳು, ಕ್ಷಣಭಂಗುರಾಃ=ಸ್ವಲ್ಪ ಹೊತ್ತಿನಲ್ಲಿಯೇ ಅಡಗಿಹೋಗುವವು, ಪರಿತ್ಯಾಗಾಃ ಚ=ಬಿಡುವಿಕೆಗಳು, ನಿಸ್ಸಂಗಾಃ=ಸಂಬಂಧವಿಲ್ಲದುವು, ಭವಂತಿ ಹಿ= ಆಗುವವು.

ತಾ॥ ಮಹಾತ್ಮರು ಸ್ನೇಹಮಾಡಿದರೆ ಅದು ಸಾಯುವವರೆಗೂ ಇರುವುದು. ಅವರ ಕೋಪವು ಕ್ಷಣಕಾಲದಲ್ಲಿ ಅಡಗಿಹೋಗುವುದು. ಅವರು ಯಾವುದನ್ನಾದರೂ ತ್ಯಜಿಸಿದಲ್ಲಿ ಅದನ್ನು ತಿರುಗಿ ಸ್ವೀಕರಿಸಲು ಬಯಸುವುದಿಲ್ಲ.

೩೯. ಅ॥ ಇತಿ=ಹೀಗೆಂದು, ಶ್ರುತ್ವಾ=ಕೇಳಿ, ಲಘುಪತನಕಃ=ಲಘುಪತನಕನು, ಬ್ರೂತೇ=ಹೇಳುತ್ತಾನೆ. 'ಮಂಥರ=ಮಂಥರನೆ, ಧನ್ಯಃ ಅಸಿ=ಪುಣ್ಯವಂತನಾಗಿರುವಿ. ಸರ್ವಥಾ=ಎಲ್ಲ ವಿಧದಿಂದಲೂ, ಶ್ಲಾಘ್ಯ-ಗುಣಃ=ಹೊಗಳಲು ಯೋಗ್ಯವಾದ ಗುಣವುಳ್ಳವನು. ಅಸಿ=ಆಗಿದ್ದೀ. ಯತಃ=ಯಾವ ಕಾರಣದಿಂದ.

೪೦. ಅ॥ ಸಂತಃ ಏವ=ಸಜ್ಜನರೇ, ಸತಾಂ=ಸಜ್ಜನರ, ನಿತ್ಯಂ=

೪೮. श्लाघ्यः स एको भुवि मानवानां
स उत्तमः सत्पुरुषः स धन्यः ।
यस्यार्थिनो वा शरणागता वा
नाशाभिभङ्गाद्विमुखा प्रयान्ति' ॥ १९० ॥

೪೨. तदेवं ते स्वेच्छाहारविहारं कुर्वाणाः सन्तुष्टाः सुखं निवसन्ति ।

---

ಯಾವಾಗಲೂ, ಆಪತ್=ಕಷ್ಟಗಳ, ಉದ್ಧರಣ=ನಿವಾರಣೆ ಮಾಡುವುದರಲ್ಲಿ, ಕ್ಷಮಾಃ=ಶಕ್ತರು. ಪಂಕಮಗ್ನಾನಾಂ=ಕೆಸರಿನಲ್ಲಿ ಮುಳುಗಿದ, ಗಜಾನಾಂ=ಆನೆಗಳ ಉದ್ಧಾರದಲ್ಲಿ, ಗಜಾಃ ಏವ=ಆನೆಗಳೇ, ಧುರಂಧರಾಃ =ಭಾರವನ್ನು ವಹಿಸುವುವು.

ತಾ॥ ಕೆಸರಿನಲ್ಲಿ ಮುಳುಗಿದ ಆನೆಗಳನ್ನು ಮೇಲಕ್ಕೆತ್ತಲು ಆನೆಗಳೇ ಸಮರ್ಥವಾದುವುಗಳು. ಅದರಂತೆ ಸಜ್ಜನರೇ ಸಜ್ಜನರನ್ನು ಸಂಕಟದಿಂದ ಪಾರುಮಾಡಲು ಶಕ್ತರು.

೪೮. ಅ॥ ಯಸ್ಯ=ಯಾವನ, ಅರ್ಥಿನಃ ವಾ=ಬೇಡುವವರಾಗಲಿ, ಶರಣಾಗತಾಃ ವಾ=ಮರೆಹೊಕ್ಕವರಾಗಲಿ, ಆಶಾಭಿಭಂಗಾತ್=ಅಪೇಕ್ಷೆಯು ನೆರವೇರದಿರುವುದರಿಂದ, ವಿಮುಖಾಃ=ಹಿಮ್ಮುಖರಾಗಿ, ನ ಪ್ರಯಾಂತಿ= ಹೋಗುವುದಿಲ್ಲವೋ; ಭುವಿ=ಭೂಮಿಯಲ್ಲಿ, ಮಾನವಾನಾಂ=ಮನುಷ್ಯರ ನಡುವೆ, ಸ ಏಕಃ=ಅವನೊಬ್ಬನು, ಶ್ಲಾಘ್ಯಃ=ಹೊಗಳಲು ಯೋಗ್ಯನು. ಸಃ, ಉತ್ತಮಃ=ಶ್ರೇಷ್ಠನು, ಸತ್ಪುರುಷಃ=ಸಜ್ಜನನು, ಸಃ, ಧನ್ಯಃ=ಪುಣ್ಯವಂತನು.

ತಾ॥ ಯಾವನು ತನ್ನನ್ನು ಬೇಡಲು ಬಂದ ಯಾಚಕರ, ಮತ್ತು ಮರೆಹೊಕ್ಕವರ ಕೋರಿಕೆಯನ್ನು ನೆರವೇರಿಸುವನೋ ಅವನೇ ಈ ಲೋಕದಲ್ಲಿ ಮನುಷ್ಯರಲ್ಲಿ ಹೊಗಳಲು ಯೋಗ್ಯನು, ಶ್ರೇಷ್ಠನು, ಸಜ್ಜನನು, ಪುಣ್ಯವಂತನು.

೪೨. ಅ॥ ತತ್=ಆದ್ದರಿಂದ, ತೇ=ಆ ಕಾಗೆ, ಆಮೆ, ಇಲಿಗಳು, ಏವಂ

अथ कदाचिच्चित्राङ्गनामा मृगः केनापि त्रासितस्तत्रागत्य मिलितः। ततः पश्चादायान्तं मृगमवलोक्य भयं सञ्चिन्त्य मन्थरो जलं प्रविष्टः। मूषिकश्च विवरं गतः। काकोऽप्युड्डीय वृक्षमारूढः। ततो लघुपतनकेन सुदूरं निरूप्य भयहेतुः न कोऽप्यायातीति आलोचितम्। पश्चात्तद्वचनादागत्य पुनः सर्वे मिलित्वा तत्रैवोपविष्टाः। मन्थरेणोक्तम्—'भद्रम्। मृग, स्वागतम्। स्वेच्छयोदकाद्याहारोऽनुभूयताम्। अत्राव-

---

= ಹೀಗೆ, ಸ್ವೇಚ್ಛಾವಿಹಾರಂ = ತಮ್ಮ ಇಷ್ಟದಂತೆ ವಿಹಾರವನ್ನು, ಕುರ್ವಾಣಾಃ = ಮಾಡುತ್ತ, ಸಂತುಷ್ಟಾಃ = ಸಂತೋಷಗೊಂಡವುಗಳಾಗಿ, ಸುಖಂ = ಸೌಖ್ಯವಾಗಿ, ನಿವಸಂತಿ = ವಾಸಮಾಡುತ್ತವೆ.

ಅಥ = ಬಳಿಕ, ಕದಾಚಿತ್ = ಒಂದಾನೊಂದು ದಿನ, ಚಿತ್ರಾಂಗನಾಮಾ = ಚಿತ್ರಾಂಗವೆಂದು ಹೆಸರುಳ್ಳ, ಮೃಗಃ = ಜಿಂಕೆಯು, ಕೇನ ಅಪಿ = ಯಾರಿಂದಲೋ, ತ್ರಾಸಿತಃ = ಭಯಗೊಳಿಸಲ್ಪಟ್ಟದ್ದಾಗಿ, ತತ್ರ = ಅಲ್ಲಿಗೆ, ಆಗತ್ಯ = ಬಂದು, ಮಿಲಿತಃ = ಸೇರಿತು. ತತಃ, ಪಶ್ಚಾತ್ = ಹಿಂದೆ, ಆಯಾಂತಂ = ಬರುತ್ತಿರುವ, ಮೃಗಂ = ಜಿಂಕೆಯನ್ನು, ಅವಲೋಕ್ಯ = ನೋಡಿ, ಭಯಂ ಸಂಚಿಂತ್ಯ = ಭಯವಾಗುವುದೆಂದು ಆಲೋಚಿಸಿ, ಮಂಥರಃ = ಆಮೆಯು, ಜಲಂ = ನೀರನ್ನು, ಪ್ರವಿಷ್ಟಃ = ಹೊಕ್ಕಿತು. ಮೂಷಿಕಃ ಚ = ಇಲಿಯೂ, ವಿವರಂ = ಬಿಲಕ್ಕೆ, ಗತಃ = ಹೋಯಿತು. ಕಾಕಃ ಅಪಿ = ಕಾಗೆಯೂ, ಉಡ್ಡೀಯ = ಮೇಲಕ್ಕೆ ಹಾರಿ, ವೃಕ್ಷಂ = ಮರವನ್ನು, ಆರೂಢಃ = ಹತ್ತಿತು. ತತಃ = ಬಳಿಕ, ಲಘುಪತನಕೇನ = ಲಘುಪತನಕವೆಂಬ ಕಾಗೆಯಿಂದ, ಸುದೂರಂ = ಬಹಳದೂರ, ನಿರೂಪ್ಯ = ವಿಮರ್ಶಿಸಿನೋಡಿ, ಕಃ ಅಪಿ = ಯಾವ ಒಂದು, ಭಯಹೇತುಃ = ಭಯದ ಕಾರಣವು, ನ ಆಯಾತಿ ಇತಿ = ಬರುತ್ತಿಲ್ಲವೆಂದು, ಆಲೋಚಿತಂ = ಆಲೋಚಿಸಲ್ಪಟ್ಟಿತು. ಪಶ್ಚಾತ್ = ಅನಂತರ, ತದ್ವಚನಾತ್ = ಅದರ ಮಾತಿನಿಂದ, ಸರ್ವೇ = ಎಲ್ಲರೂ, ಪುನಃ = ಮರಳಿ, ಆಗತ್ಯ = ಬಂದು, ಮಿಳಿತ್ವಾ = ಒಟ್ಟುಕೂಡಿ, ತತ್ರ ಏವ =

स्थानेन वनमिदं सनाथीक्रियताम् ।' चित्राङ्गो ब्रूते—'लुब्धकत्रासितोऽहं भवतां शरणमागतः । भवद्भिः सह सख्यमिच्छामि' हिरण्यकोऽवदत्-मित्रत्वं तावदस्माभिः सह भवतायत्नेन मिलितम् । यतः ।

७३. औरसं कृतसम्बन्धं तथा वंशक्रमागतम् ।
रक्षितं व्यसनेभ्यश्च मित्रं ज्ञेयं चतुर्विधम् ॥ १९१ ॥

---

ಅಲ್ಲಿಯೇ, ಉಪವಿಷ್ಟಾಃ = ಕೂತುಕೊಂಡುವು. ಮಂಥರೇಣ = ಆಮೆಯಿಂದ, ಉಕ್ತಂ = ಹೇಳಲ್ಪಟ್ಟಿತು. 'ಭದ್ರಂ = ಮಂಗಳವಾಗಲಿ, ಮೃಗ = ಜಿಂಕೆಯೇ, ಸ್ವಾಗತಂ = ಸುಖಾಗಮನವಾಗಲಿ. ಸ್ವೇಚ್ಛಯಾ = ನಿನ್ನಿಚ್ಛೆಯಂತೆ, ಉದಕಾದಿ = ನೀರೇ ಮೊದಲಾದ, ಆಹಾರಃ = ಆಹಾರವು, ಅನುಭೂಯತಾಂ = ಅನುಭವಿಸಲ್ಪಡಲಿ. ಅತ್ರ = ಇಲ್ಲಿ, ಅವಸ್ಥಾನೇನ = ಇರುವುದರಿಂದ, ಇದಂ ವನಂ = ಈ ಕಾಡು, ಸನಾಥೀಕ್ರಿಯತಾಂ = ಸ್ವಾಮಿಯಿಂದ ಸಹಿತವಾಗಿ ಮಾಡಲ್ಪಡಲಿ.' ಚಿತ್ರಾಂಗಃ = ಚಿತ್ರಾಂಗವು, ಬ್ರೂತೇ = ಹೇಳುತ್ತದೆ. ಲುಬ್ಧಕ = ಬೇಡನಿಂದ, ತ್ರಾಸಿತಃ = ಹೆದರಿಸಲ್ಪಟ್ಟ, ಅಹಂ = ನಾನು, ಭವತಾಂ = ನಿಮ್ಮ, ಶರಣಂ ಆಗತಃ = ಮರೆಹೊಕ್ಕೆನು. ಭವದ್ಭಿಃ ಸಹ = ನಿಮ್ಮೊಡನೆ, ಸಖ್ಯಂ = ಸ್ನೇಹವನ್ನು, ಇಚ್ಛಾಮಿ = ಅಪೇಕ್ಷಿಸುತ್ತೇನೆ. ಹಿರಣ್ಯಕಃ ಅವದತ್ = ಹಿರಣ್ಯಕನು ಹೇಳುತ್ತಾನೆ. ಭವತಾ = ನಿನ್ನಿಂದ, ಅಸ್ಮಾಭಿಃ ಸಹ = ನಮ್ಮೊಡನೆ, ಮಿತ್ರತ್ವಂ ತಾವತ್ = ಸ್ನೇಹವು, ಅಯತ್ನೇನ = ಪ್ರಯತ್ನವಿಲ್ಲದಿರುವುದರಿಂದ, ಮಿಲಿತಂ = ಕೂಡಿದೆ.

೭೩. ಅ॥ ಔರಸಂ = ಹೊಟ್ಟೆಯಲ್ಲಿ ಹುಟ್ಟಿದವ, ಕೃತಸಂಬಂಧಂ = ಮಾಡಲ್ಪಟ್ಟ ಬಂಧುತ್ವವುಳ್ಳವ, ತಥಾ = ಹಾಗೆಯೇ, ವಂಶಕ್ರಮಾಗತಂ = ಕುಲಪರಂಪರೆಯಿಂದ ಬಂದವ, ವ್ಯಸನೇಭ್ಯಃ = ಕಷ್ಟದಿಂದ, ರಕ್ಷಿತಂ = ಕಾಪಾಡಲ್ಪಟ್ಟವ, (ಹೀಗೆ) ಮಿತ್ರಂ = ಸ್ನೇಹಿತನನ್ನು, ಚತುರ್ವಿಧಂ = ನಾಲ್ಕು ಪ್ರಕಾರನಾಗಿರುವನೆಂದು, ಜ್ಞೇಯಂ = ತಿಳಿಯಬೇಕು.

ತಾ॥ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು, ಬಾಂಧವ್ಯವನ್ನು ಬೆಳಸಿ

೪೪. तदत्रभवता स्वगृहनिर्विशेषं स्थीयताम्' । तत् श्रुत्वा मृगः सानन्दो भूत्वा स्वेच्छाहारं कृत्वा पानीयं पीत्वा जलासन्नतरुच्छायायामुपविष्टः । अथ मन्थरेणोक्तम्—'सखे मृग, एतस्मिन्निर्जने वने केन त्रासितोऽसि । कदाचित्किं व्याधाः सञ्चरन्ति ।' मृगेणोक्तम्—'अस्ति कलिङ्गविषये रुक्माङ्गदो नाम नरपतिः । स च दिग्विजयक्रमेणागत्य चन्द्रभागानदीतीरे समावासितकटको वर्तते। प्रातश्च तेनात्रागत्य कर्पूरसरस्समीपे भवितव्यमिति

---

ದವರು, ವಂಶಪರಂಪರೆಯಿಂದ ಬಂದ ಆಪ್ತರು, ತನ್ನಿಂದ ಕಷ್ಟದಿಂದ ರಕ್ಷಿಸಲ್ಪಟ್ಟವರು ಹೀಗೆ ಸ್ನೇಹಿತರು ನಾಲ್ಕು ವಿಧರಾಗಿರುವರು.

೪೪. ಅ|| ತತ್=ಆದ್ದರಿಂದ, ಅತ್ರಭವತಾ=ಪೂಜ್ಯನಾದ ನಿನ್ನಿಂದ, ಸ್ವಗೃಹ=ನಿನ್ನ ಮನೆಗೆ, ನಿರ್ವಿಶೇಷಂ=ಸಮಾನವಾಗಿ, ಸ್ಥೀಯತಾಂ=ವಾಸಮಾಡೋಣವಾಗಲಿ. ಮೃಗಃ=ಜಿಂಕೆಯು, ತತ್=ಅದನ್ನು, ಶ್ರುತ್ವಾ=ಕೇಳಿ,ಸಾನಂದಃ ಭೂತ್ವಾ=ಸಂತೋಷದಿಂದ ಸಹಿತವಾಗಿ, ಸ್ವೇಚ್ಛಾಹಾರಂ ಕೃತ್ವಾ=ತನ್ನಿಷ್ಟದಂತೆ ತಿಂದು, ಪಾನೀಯಂ=ನೀರನ್ನು,ಪೀತ್ವಾ=ಕುಡಿದು, ಜಲಾಸನ್ನ=ನೀರಿನ ಹತ್ತಿರದ,ತರು=ಮರದ, ಛಾಯಾಯಾಂ=ನೆರಳಿನಲ್ಲಿ, ಉಪವಿಷ್ಟಃ=ಕೂತುಕೊಂಡಿತು. (ಮಲಗಿತು) ಅಥ=ಬಳಿಕ, ಮಂಥರೇಣ=ಆಮೆಯಿಂದ, ಉಕ್ತಂ=ಹೇಳಲ್ಪಟ್ಟಿತು. ಸಖೇ=ಸ್ನೇಹಿತನಾದ, ಮೃಗ=ಜಿಂಕೆಯೆ, ಏತಸ್ಮಿನ್=ಈ, ನಿರ್ಜನೇ=ಜನರಿಲ್ಲದ, ವನೇ=ಕಾಡಿನಲ್ಲಿ, ಕೇನ=ಯಾರಿಂದ, ತ್ರಾಸಿತಃ ಅಸಿ=ಹೆದರಿಸಲ್ಪಟ್ಟಿರುವಿ. ಕದಾಚಿತ್=ಒಂದಾನೊಂದು ವೇಳೆ, ವ್ಯಾಧಾಃ=ಬೇಡರು, ಸಂಚರಂತಿ ಕಿಂ=ಸಂಚರಿಸುತ್ತಾರೇನು ? ಮೃಗೇಣೋಕ್ತಂ=ಜಿಂಕೆಯಿಂದ ಹೇಳಲ್ಪಟ್ಟಿತು. ಕಲಿಂಗ-ವಿಷಯೇ=ಕಳಿಂಗ ದೇಶದಲ್ಲಿ, ರುಕ್ಮಾಂಗದೋ ನಾಮ=ರುಕ್ಮಾಂಗದನೆಂದು ಪ್ರಸಿದ್ಧನಾದ, ನರಪತಿಃ=ರಾಜನು,ಅಸ್ತಿ=ಇದ್ದಾನೆ. ಸಃ ಚ=ಆ ರಾಜನೂ, ದಿಗ್ವಿಜಯಕ್ರಮೇಣ=ದಿಕ್ಕಿನಲ್ಲಿರುವ ರಾಜರನ್ನು ಜಯಿಸುವ ಕ್ರಮದಿಂದ, ಆಗತ್ಯ=ಬಂದು, ಚಂದ್ರಭಾಗಾನದೀತೀರೇ=ಚಂದ್ರಭಾಗಾನದಿಯ ದಡದಲ್ಲಿ,

व्याधानां मुखात् किंवदन्ती श्रूयते । तदत्रापि प्रातरवस्थानं भयहेतुकमित्यालोच्य यथावसरकार्यमारभ्यताम् ।' तत् श्रुत्वा कूर्मः सभयमाह– 'जलाशयान्तरं गच्छामि ।' काकमृगावप्युक्तवन्तौ–'एवमस्तु ।' ततो हिरण्यको विहस्याह–'जलाशयान्तरे प्राप्ते मन्थरस्य कुशलम् । स्थले गच्छतः कः प्रतीकारः । यतः ।

---

ಸಮಾವಾಸಿತಕಟಕಃ=ವಾಸಮಾಡಿಸಲ್ಪಟ್ಟ ಸೇನೆಯುಳ್ಳವನಾಗಿ, ವರ್ತತೇ= ಇದ್ದಾನೆ. ಪ್ರಾತಃ ಚ=ಬೆಳಗ್ಗೆ, ತೇನ=ಅವನಿಂದ, ಆಗತ್ಯ=ಬಂದು, ಕರ್ಪೂರಸರಸ್ಸಮೀಪೇ=ಕರ್ಪೂರ ಸರೋವರದ ಹತ್ತಿರದಲ್ಲಿ, ಭವಿತವ್ಯಂ =ಇರತಕ್ಕದ್ದೆಂದು, ವ್ಯಾಧಾನಾಂ=ಬೇಡರ, ಮುಖಾತ್=ಬಾಯಿಯಿಂದ, ಕಿಂವದಂತೀ=ಸಮಾಚಾರವು, ಶ್ರೂಯತೇ=ಕೇಳಲ್ಪಡುತ್ತದೆ. ತತ್= ಆದ್ದರಿಂದ, ಅತ್ರ=ಇಲ್ಲಿ, ಅವಸ್ಥಾನಂ ಅಪಿ=ಇರುವಿಕೆಯೂ, ಭಯಹೇತುಕಂ=ಹೆದರಿಕೆಯ ಕಾರಣವುಳ್ಳದು, ಇತಿ=ಹೀಗೆಂದು, ಆಲೋಚ್ಯ= ಆಲೋಚಿಸಿ, ಯಥಾವಸರಕಾರ್ಯಂ=ಸಮಯೋಚಿತ ಕೆಲಸವು, ಆರಭ್ಯತಾಂ =ಆರಂಭಿಸಲ್ಪಡಲಿ. ತತ್=ಅದನ್ನು, ಶ್ರುತ್ವಾ=ಕೇಳಿ, ಕೂರ್ಮಃ= ಆಮೆಯು, ಸಭಯಂ=ಹೆದರಿಕೆಯಿಂದ ಸಹಿತವಾಗಿ, ಆಹ=ಹೇಳಿತು. ಜಲಾಶಯಾಂತರಂ=ಬೇರೆ ಕೊಳಕ್ಕೆ, ಗಚ್ಛಾಮಿ=ಹೋಗುತ್ತೇನೆ. ಕಾಕಮೃಗೌ ಅಪಿ=ಕಾಗೆ ಮತ್ತು ಜಿಂಕೆಗಳೂ, ಉಕ್ತವಂತೌ=ಹೇಳಿದುವು. ಏವಂ ಅಸ್ತು=ಹೀಗೆಯೇ ಆಗಲಿ. ತತಃ=ಬಳಿಕ, ಹಿರಣ್ಯಕಃ=ಹಿರಣ್ಯಕನು, ವಿಹಸ್ಯ=ನಕ್ಕು, ಆಹ=ಹೇಳಿತು. ಜಲಾಶಯಾಂತರೇ=ಇನ್ನೊಂದು ಕೊಳವು, ಪ್ರಾಪ್ತೇ=ಹೊಂದಲು, ಮಂಥರಸ್ಯ=ಆಮೆಗೆ, ಕುಶಲಂ= ಕ್ಷೇಮವಾಗುವುದು. ಸ್ಥಲೇ=ನೆಲದಮೇಲೆ, ಗಚ್ಛತಃ=ಹೋಗುವ ಆಮೆಗೆ, ಪ್ರತೀಕಾರಃ ಕಃ=ಪ್ರತಿಕ್ರಿಯೆ ಯಾವುದು. (ಆಪತ್ತು ಬಂದರೆ ತಪ್ಪಿಸಿ ಕೊಳ್ಳುವ ಬಗೆ ಹೇಗೆ).

೪೫. **अम्भांसि जलजन्तूनां दुर्गं दुर्गनिवासिनाम् ।**
**स्वभूमिः श्वापदादीनां राज्ञां मन्त्री परं बलम् ॥ १९२ ॥**

೪೬. सखे लघुपतनक अनेनोपदेशेन तथा भवितव्यम् ।

೪೭. **स्वयं वीक्ष्य यथा वध्वाः पीडितं कुचकुड्मलम् ।**
**वणिक्पुत्रोऽभवद्दुःखी त्वं तथैव भविष्यसि' ॥ १९३ ॥**

---

೪೫. ಅ॥ ಜಲಜಂತೂನಾಂ=ಜಲಚರ ಪ್ರಾಣಿಗಳಿಗೆ,ಅಂಭಾಂಸಿ=ನೀರು, ದುರ್ಗನಿವಾಸಿನಾಂ=ಅಗಮ್ಯ ಕೋಟೆಯಲ್ಲಿ ವಾಸಮಾಡುವವರಿಗೆ, ದುರ್ಗಂ =ಅಗಮ್ಯ ಕೋಟೆಯು, ಶ್ವಾಪದಾದೀನಾಂ=ಹುಲಿ ಮೊದಲಾದುವುಗಳಿಗೆ, ಸ್ವಭೂಮಿಃ=ತಮ್ಮ ಸ್ಥಳವು, ರಾಜ್ಞಾಂ = ರಾಜರಿಗೆ, ಮಂತ್ರೀ= ಮಂತ್ರಿಯು, ಪರಂ ಬಲಂ=ಹೆಚ್ಚಾದ ಶಕ್ತಿಯು.

ತಾ॥ ನೀರಿನಲ್ಲಿ ವಾಸಮಾಡುವ ಪ್ರಾಣಿಗಳು ನೀರಿನಲ್ಲಿ ವಾಸಿಸುವಾಗ ಬಲವು ಹೆಚ್ಚಿ ಸುರಕ್ಷಿತವಾಗಿರುವುವು. ಪ್ರವೇಶಿಸಲಾಗದ ಕೋಟೆಯಲ್ಲಿ ವಾಸಿಸುವ ಪ್ರಾಣಿಗಳಿಗೆ ಕೋಟೆಯೂ, ಹುಲಿ ಮೊದಲಾದುವುಗಳಿಗೆ ತಮ್ಮ ವಾಸದ ಸ್ಥಳವೂ, ರಾಜರಿಗೆ ಮಂತ್ರಿಗಳೂ ಹೆಚ್ಚು ಉತ್ತೇಜನವಿತ್ತು ಬಲ ವನ್ನುಂಟುಮಾಡುವರು.

೪೬. ಅ॥ ಸಖೇ=ಸ್ನೇಹಿತನಾದ, ಲಘುಪತನಕ=ಲಘುಪತನಕನೆ । ಅನೇನ=ಈ, ಉಪದೇಶೇನ=ಈ ಉಪದೇಶದಿಂದ, ತಥಾ=ಹಾಗೆ,ಭವಿತವ್ಯಂ =ಇರಬೇಕು.

೪೭. ಅ॥ ವಣಿಕ್ಪುತ್ರಃ=ವೈಶ್ಯನ ಮಗನು, ವಧ್ವಾಃ=ಹೆಂಡತಿಯ, ಪೀಡಿತಂ=ಆಲಿಂಗನೆಯಿಂದ ಹಿಚುಕಲ್ಪಟ್ಟ, ಕುಚಕುಡ್ಮಲಂ=ಮೊಗ್ಗಿನಂತಿ ರುವ ಸ್ತನವನ್ನು, ಸ್ವಯಂ=ತಾನೇ, ವೀಕ್ಷ್ಯ=ನೋಡಿ, ಯಥಾ=ಹೇಗೆ, ದುಃಖೀ=ವ್ಯಸನವುಳ್ಳವನು, ಅಭವತ್=ಆದನೋ; ತ್ವಂ=ನೀನು, ತಥೈವ =ಹಾಗೆಯೇ, ಭವಿಷ್ಯಸಿ=ಆಗುವಿ.

೪೮. ऊचुः—'कथमेतत् ।' हिरण्यकः कथयति—

## कथा ७

೧. अस्ति कान्यकुब्जविषये वीरसेनो नाम राजा । तेन वीरपुरनाम्नि नगरे तुङ्गबलो नाम राजपुत्रो भोगपतिः कृतः । स च महाधनः तरुण एकदा स्वनगरे भ्राम्यन्नतिप्रौढयौवनां लावण्यवतीं नाम वणिक्पुत्रवधूमालोकयामास । ततः स्वहर्म्यं गत्वा स्मराकुलमतिस्तस्याः कृते दूतीं प्रेषितवान् । यतः ।

---

ತಾ॥ ವೈಶ್ಯಕುಮಾರನು ತನ್ನ ಮುಂದೆಯೇ ತನ್ನ ಹೆಂಡತಿಯನ್ನು ತುಂಗಬಲನೆಂಬ ರಾಜಕುಮಾರನು ಆಲಿಂಗಿಸಿ ರಮಿಸುತ್ತಿರುವುದನ್ನು ನೋಡಿ ವ್ಯಥೆಪಟ್ಟಂತೆ ನೀನೂ ಆಗುವಿ.

೪೮. ಅ॥ ಏತತ್ = ಇದು, ಕಥಂ = ಹೇಗೆ (ಎಂದು), ಊಚುಃ = ಹೇಳಿದುವು. ಹಿರಣ್ಯಕಃ = ಹಿರಣ್ಯಕನು, ಕಥಯತಿ = ಹೇಳುತ್ತಾನೆ.

## ಏಳನೆ ಕಥೆ

೧. ಅ॥ ಕಾನ್ಯಕುಜ್ಜೇ = ಕಾನ್ಯಕುಬ್ಜ ಎಂಬ ದೇಶದಲ್ಲಿ, ವೀರಸೇನಃ ನಾಮ = ವೀರಸೇನನೆಂದು ಪ್ರಸಿದ್ಧನಾದ, ರಾಜಾ = ದೊರೆಯು, ಅಸ್ತಿ = ಇದ್ದಾನೆ. ತೇನ = ಅವನಿಂದ, ವೀರಪುರನಾಮ್ನಿ = ವೀರಪುರವೆಂದು ಹೆಸರುಳ್ಳ, ನಗರೇ = ಪಟ್ಟಣದಲ್ಲಿ, ತುಂಗಬಲೋ ನಾಮ = ತುಂಗಬಲನೆಂಬ ರಾಜಪುತ್ರಃ = ರಾಜಕುಮಾರನು, ಭೋಗಪತಿಃ = ದ್ರವ್ಯಗಳ ಒಡೆಯನಾಗಿ, ಕೃತಃ = ಮಾಡಲ್ಪಟ್ಟನು. ಮಹಾಧನಃ = ಅತಿಶಯ ಹಣವುಳ್ಳ, ತರುಣಃ = ಯುವಕನಾದ, ಸಃ ಚ = ಅವನೂ, ಏಕದಾ = ಒಂದಾನೊಂದು ದಿನ, ಸ್ವನಗರೇ = ತನ್ನ ಪಟ್ಟಣದಲ್ಲಿ, ಭ್ರಾಮ್ಯನ್ = ಸಂಚರಿಸುತ್ತ, ಅತಿಪ್ರೌಢಯೌವನಾಂ = ಅತ್ಯಂತವಾಗಿ ಯುವತಿಯಾದ, ಲಾವಣ್ಯವತೀಂ ನಾಮ =

೨. सन्मार्गे तावदास्ते प्रभवति पुरुषस्तावदेवेन्द्रियाणां
लज्जां तावद्विधत्ते विनयमपि समालम्बते तावदेव ।
भ्रूचापाकृष्टमुक्ताः श्रवणपथगता नीलपक्ष्माण एते
यावल्लीलावतीनां न हृदि धृतिमुषो दृष्टिबाणाः पतन्ति ॥

---

ಲಾವಣ್ಯವತಿಯೆಂಬ, ವಣಿಕ್ಪುತ್ರವಧೂಂ = ವರ್ತಕನ ಮಗನ ಹೆಂಡತಿಯನ್ನು, ಆಲೋಕಯಾಮಾಸ = ನೋಡಿದನು. ತತಃ = ಬಳಿಕ, ಸ್ವಹರ್ಮ್ಯಂ = ತನ್ನ ಅರಮನೆಗೆ, ಗತ್ವಾ = ಹೋಗಿ, ಸ್ಮರಾಕುಲಮತಿಃ = ಮನ್ಮಥನಿಂದ ವ್ಯಥೆಗೊಂಡ ಬುದ್ಧಿಯುಳ್ಳವನಾಗಿ, ತಸ್ಯಾಃ ಕೃತೇ = ಆ ಲಾವಣ್ಯವತಿಗಾಗಿ; ದೂತೀಂ = ದಾಸಿಯನ್ನು, ಪ್ರೇಷಿತವಾನ್ = ಕಳುಹಿಸಿದನು.

೨. ಅ॥ ಯಾವತ್ = ಎಷ್ಟರಲ್ಲಿ, ಲೀಲಾವತೀನಾಂ = ವಿಲಾಸವತಿಯರಾದ ಹೆಂಗಸರ, ಭ್ರೂ = ಹುಬ್ಬುಗಳೆಂಬ, ಚಾಪ = ಬಿಲ್ಲಿನಿಂದ, ಆಕೃಷ್ಟ = ಎಳೆಯಲ್ಪಟ್ಟ, ಮುಕ್ತಾಃ = ಬಿಡಲ್ಪಟ್ಟ, ಶ್ರವಣಪಥ = ಕಿವಿಯ ದಾರಿಯನ್ನು, ಗತಾಃ = ಹೊಂದಿದ, ನೀಲಪಕ್ಷ್ಮಾಣಃ = ಕಪ್ಪುರೆಪ್ಪೆಗಳುಳ್ಳ, ಧೃತಿಮುಷಃ = ಧೈರ್ಯವನ್ನು ಅಪಹರಿಸುವ, ಏತೇ = ಈ, ದೃಷ್ಟಿಬಾಣಾಃ = ನೋಟವೆಂಬ ಬಾಣಗಳು, ಹೃದಿ = ಎದೆಯಲ್ಲಿ, ನ ಪತಂತಿ = ಬೀಳುವುದಿಲ್ಲವೊ, ತಾವತ್ = ಅಷ್ಟರವರೆಗೆ, ಪುರುಷಃ = ಮನುಷ್ಯನು, ಸನ್ಮಾರ್ಗೇ = ಒಳ್ಳೆದಾರಿಯಲ್ಲಿ, ಆಸ್ತೇ = ಇರುತ್ತಾನೆ. ತಾವತ್, ಇಂದ್ರಿಯಾಣಾಂ = ಇಂದ್ರಿಯಗಳ ವಿಷಯದಲ್ಲಿ, ಪ್ರಭವತಿ = ಸಮರ್ಥನಾಗುತ್ತಾನೆ. ತಾವತ್, ಲಜ್ಜಾಂ = ನಾಚಿಕೆಯನ್ನು, ವಿಧತ್ತೇ = ಹೊಂದಿರುತ್ತಾನೆ. ತಾವತ್ ಏವ = ಅಷ್ಟರವರೆಗೆ, ವಿನಯಂ ಅಪಿ = ವಿಧೇಯತೆಯನ್ನೂ, ಸಮಾಲಂಬತೇ = ಆಶ್ರಯಿಸುತ್ತಾನೆ.

ತಾ॥ ಮನುಷ್ಯನು ವಿಲಾಸವತಿಯಾದ ತರುಣಿಯ ಧೈರ್ಯವನ್ನು ನೀಗುವ ರಮ್ಯನೋಟಗಳಿಗೆ ವಿಷಯನಾಗುವವರೆಗೆ (ತರುಣಿಯನ್ನು ನೋಡುವ ತನಕ) ಒಳ್ಳೆದಾರಿಯಲ್ಲಿರುವನು. ಜಿತೇಂದ್ರಿಯನಾಗಿರುವನು. ನಾಚಿಕೆಯುಳ್ಳವನಾಗಿರುವನು. ಮತ್ತು ವಿನೀತನಾಗಿರುವನು.

३. सापि लावण्यवती तदवलोकनक्षणात्प्रभृति स्मरशरप्रहारजर्जरित-हृदया तदेकचित्ताऽभवत् । तथा ह्युक्तम्—

४. असत्यं साहसं माया मात्सर्यं चातिलुब्धता ।
निर्गुणत्वमशौचत्वं स्त्रीणां दोषाः स्वभावजाः ॥ १९५ ॥

५. अथ दूतीवचनं श्रुत्वा लावण्यवत्युवाच—'अहं पतिव्रता कथमेत-स्मिन्नधर्मे पतिलङ्घने प्रवर्ते । यतः ।

---

೩. ಅ॥ ಸಾ ಲಾವಣ್ಯವತೀ ಅಪಿ = ಆ ಲಾವಣ್ಯವತಿಯೂ, ತತ್ = ಅವನನ್ನು, ಅವಲೋಕನಕ್ಷಣಾತ್ ಪ್ರಭೃತಿ = ನೋಡಿದ ಸಮಯ ಮೊದಲ್ಗೊಂಡು, ಸ್ಮರ = ಮನ್ಮಥನ, ಶರ = ಬಾಣದ, ಪ್ರಹಾರ = ಹೊಡೆತದಿಂದ, ಜರ್ಜರಿತ = ಶಿಥಿಲವಾದ, ಹೃದಯಾ = ಮನಸ್ಸುಳ್ಳವಳಾಗಿ, ತದೇಕಚಿತ್ತಾ = ಅವನಲ್ಲಿಯೇ ನೆಲೆಸಿದ ಮನಸ್ಸುಳ್ಳವಳು, ಅಭವತ್ = ಆದಳು. ತಥಾ ಹಿ ಉಕ್ತಂ = ಹಾಗೆಯೇ ಹೇಳಲ್ಪಟ್ಟಿದೆ.

೪. ಅ॥ ಅಸತ್ಯಂ = ಸುಳ್ಳು, ಸಾಹಸಂ = ದಿಟ್ಟತನ, ಮಾಯಾ = ಕಪಟ, ಮಾತ್ಸರ್ಯಂ = ಹೊಟ್ಟೆಕಿಚ್ಚು, ಅತಿಲುಬ್ಧತಾ = ಅತ್ಯಾಶೆ, ನಿರ್ಗುಣತ್ವಂ = ಗುಣಾಭಾವ, ಅಶೌಚತ್ವಂ = ಮಲಿನತೆ ಇವು, ಸ್ತ್ರೀಣಾಂ = ಹೆಂಗಸರ, ಸ್ವಭಾ-ವಜಾಃ = ಸ್ವಾಭಾವಿಕವಾದ, ದೋಷಾಃ = ದೋಷಗಳು.

ತಾ॥ ಹೆಂಗಸರಲ್ಲಿ ಸುಳ್ಳಾಡುವಿಕೆ, ದಿಟ್ಟತನ, ವಂಚನೆ, ಅಸೂಯೆ, ಅತ್ಯಾಶೆ, ಗುಣವಿಲ್ಲದಿರುವುದು, ಕೊಳೆಯಾಗಿರುವಿಕೆ ಇವು ಸ್ವಭಾವದಿಂದುಂಟಾದ ದೋಷಗಳು.

೫. ಅ॥ ಅಥ = ಬಳಿಕ, ದೂತೀವಚನಂ = ದೂತಿಯ ಮಾತನ್ನು, ಶ್ರುತ್ವಾ = ಕೇಳಿ, ಲಾವಣ್ಯವತೀ = ಲಾವಣ್ಯವತಿಯು, ಉವಾಚ = ಹೇಳಿದಳು. ಅಹಂ = ನಾನು, ಪತಿವ್ರತಾ = ಪತಿವ್ರತೆಯು. ಏತಸ್ಮಿನ್ = ಈ, ಪತಿಲಂಘನೇ = ಗಂಡನನ್ನು ಮೀರುವ, ಅಧರ್ಮೇ = ವಿರುದ್ಧ ಧರ್ಮದಲ್ಲಿ, ಕಥಂ = ಹೇಗೆ, ಪ್ರವರ್ತೇ = ತೊಡಗಿಯೇನು.

೬. सा भार्या या गृहे दक्षा सा भार्या या प्रजावती ।
सा भार्या या पतिप्राणा सा भार्या या पतिव्रता ॥ १९६॥

೭. न सा भार्येति वक्तव्या यस्या भर्ता न तुष्यति ।
तुष्टे भर्तरि नारीणां सन्तुष्टाः सर्वदेवताः ॥ १९७ ॥

೮. ततो यद्यदादिशति मे प्राणेश्वरस्तदेवाहमविचारितं करोमि ।'

---

೬. ಅ॥ ಯಾ=ಯಾವಳು, ಗೃಹೇ=ಮನೆಯಲ್ಲಿ, ದಕ್ಷಾ=ಸಮರ್ಥಳಾಗಿರುವಳೊ, ಸಾ ಭಾರ್ಯಾ =ಅವಳೇ ಹೆಂಡತಿ. ಯಾ ಪ್ರಜಾವತೀ=ಯಾವಳು ಮಕ್ಕಳುಳ್ಳವಳೊ, ಸಾ ಭಾರ್ಯಾ=ಅವಳೇ ಹೆಂಡತಿ. ಯಾ ಪತಿ-ಪ್ರಾಣಾ=ಯಾವಳು ಗಂಡನ ಪ್ರಾಣದಂತಿರುವಳೊ, ಸಾ ಭಾರ್ಯಾ. ಯಾ ಪತಿವ್ರತಾ=ಯಾವಳು ಪತಿವ್ರತೆಯೋ, ಸಾ ಭಾರ್ಯಾ=ಅವಳೇ ಹೆಂಡತಿ.

ತಾ॥ ಮನೆಯ ಕೆಲಸಗಳನ್ನು ಮಾಡಲು ಸಮರ್ಥಳೊ, ಮಕ್ಕಳುಳ್ಳವಳೊ, ಗಂಡನಿಗೆ ಅತ್ಯಂತ ಪ್ರಿಯಳೊ, ಪತಿವ್ರತೆಯೂ ಆದವಳೇ ಹೆಂಡತಿಯೆನ್ನಿಸಿಕೊಳ್ಳುವಳು.

೭. ಅ॥ ಯಸ್ಯಾಃ = ಯಾವಳ, ಭರ್ತಾ=ಗಂಡನು, ನ ತುಷ್ಯತಿ=ಸಂತೋಷಗೊಳ್ಳುವುದಿಲ್ಲವೊ. ಸಾ=ಅವಳು, ಭಾರ್ಯಾ ಇತಿ=ಹೆಂಡತಿಯೆಂದು, ನ ವಕ್ತವ್ಯಾ=ಹೇಳಕೂಡದು. ನಾರೀಣಾಂ=ಹೆಂಗಸರಿಗೆ, ಭರ್ತರಿ=ಗಂಡನು, ತುಷ್ಟೇ ಸತಿ=ಸಂತೋಷಗೊಳ್ಳಲು, ಸರ್ವದೇವತಾಃ=ಎಲ್ಲ ದೇವತೆಗಳು, ಸಂತುಷ್ಟಾಃ=ಸಂತೋಷಗೊಳ್ಳುವರು.

ತಾ॥ ಗಂಡನ ಸಂತೋಷಕ್ಕೆ ವಿಷಯಳಾಗದವಳನ್ನು ಹೆಂಡತಿಯೆಂದು ಹೇಳಕೂಡದು. ಹೆಂಗಸರಿಗೆ ಗಂಡನು ಸಂತೋಷಗೊಂಡರೆ ಎಲ್ಲ ದೇವತೆಗಳೂ ಸಂತೋಷಗೊಳ್ಳುವರು.

೮. ಅ॥ ತತಃ=ಆದ್ದರಿಂದ ಮೇ=ನನ್ನ, ಪ್ರಾಣೇಶ್ವರಃ=ಪತಿಯು, ಯತ್ ಯತ್=ಯಾವ ಯಾವುದನ್ನು, ಆದಿಶತಿ=ಅಪ್ಪಣೆ ಮಾಡುತ್ತಾನೊ

दूत्योक्तम्—'सत्यतममेतत् ।' लावण्यवत्युवाच—'ध्रुवं सत्यमेतत् ।' ततो दूतिकया गत्वा तत्तत्सर्वं तुङ्गबलस्याग्रे निवेदितम् । तत् श्रुत्वा तुङ्गबलोऽब्रवीत्—'स्वामिनानीय समर्पयितव्या इति कथमेतच्छक्यम्' कुट्टन्याह—'उपायः क्रियताम् । तथा चोक्तम्—

९. उपायेन हि यच्छक्यं न तच्छक्यं पराक्रमैः ।
शृगालेन हतो हस्ती गच्छता पङ्कवर्त्मना' ॥ १९८ ॥

---

ತತ್ ಏವ=ಅದನ್ನೇ, ಅಹಂ=ನಾನು, ಅವಿಚಾರಿತಂ=ವಿಚಾರಮಾಡದ ಹಾಗೆ, ಕರೋಮಿ=ಮಾಡುತ್ತೇನೆ ದೂತ್ಯಾ=ದೂತಿಯಿಂದ, ಉಕ್ತಂ=ಹೇಳಲ್ಪಟ್ಟಿತು. ಏತತ್=ಇದು, ಸತ್ಯತಮಂ=ಅತ್ಯಂತ ನಿಜವಾದುದೊ? ಲಾವಣ್ಯವತೀ ಉವಾಚ=ಲಾವಣ್ಯವತಿಯು ಹೇಳಿದಳು, ಧ್ರುವಂ=ನಿಶ್ಚಯವಾಗಿಯೂ, ಏತತ್=ಇದು, ಸತ್ಯಂ=ನಿಜ ತತಃ=ಬಳಿಕ,ದೂತಿಕಯಾ=ದೂತಿಯಿಂದ, ಗತ್ವಾ=ಹೋಗಿ, ತತ್ತತ್ಸರ್ವಂ=ಅದೆಲ್ಲ, ತುಂಗಬಲಸ್ಯ=ತುಂಗಬಲನ, ಅಗ್ರೇ=ಮುಂದೆ, ನಿವೇದಿತಂ=ತಿಳಿಸಲ್ಪಟ್ಟಿತು. ತತ್ ಶ್ರುತ್ವಾ ತುಂಗಬಲಃ ಅಬ್ರವೀತ್=ಅದನ್ನು ಕೇಳಿ ತುಂಗಬಲನು ಹೇಳಿದನು ಸ್ವಾಮಿನಾ=ಪತಿಯಿಂದ, ಆನೀಯ=ಕರತಂದು, ಸಮರ್ಪಯಿತವ್ಯಾ=ಒಪ್ಪಿಸತಕ್ಕುದು, ಇತಿ=ಹೀಗೆಂಬ, ಏತತ್=ಇದು, ಕಥಂ=ಹೇಗೆ, ಶಕ್ಯಂ=ಸಾಧ್ಯ. ಕುಟ್ಟನೀ=ತಲೆಹಿಡಿಕೆಯು (ಕಾಮುಕ ಕಾಮಿನಿಯರನ್ನು ಸೇರಿಸುವವಳು) ಆಹ=ಹೇಳಿದಳು, ಉಪಾಯಃ=ಯುಕ್ತಿಯು, ಕ್ರಿಯತಾಂ=ಮಾಡಲ್ಪಡಲಿ. ತಥಾ ಚ=ಹಾಗೆಯೇ, ಉಕ್ತಂ=ಹೇಳಲ್ಪಟ್ಟಿದೆ.

೯. ಅ॥ ಯತ್=ಯಾವುದು, ಉಪಾಯೇನ=ಯುಕ್ತಿಯಿಂದ, ಶಕ್ಯಂ=ಸಾಧ್ಯವೊ, ತತ್=ಅದು, ಪರಾಕ್ರಮೈಃ=ಶಕ್ತಿಯಿಂದ, ನ ಶಕ್ಯಂ=ಸಾಧ್ಯವಿಲ್ಲ. ಪಂಕವರ್ತ್ಮನಾ=ಕೆಸರಿನ ದಾರಿಯಿಂದ, ಗಚ್ಛತಾ=ಹೋಗುತ್ತಿರುವ, ಶೃಗಾಲೇನ=ನರಿಯಿಂದ, ಹಸ್ತೀ=ಆನೆಯು, ಹತಃ=ಕೊಲ್ಲಲ್ಪಟ್ಟಿತು.

१०. राजपुत्रः पृच्छति—'कथमेतत्' । सा कथयति—

## कथा ८

१. अस्ति ब्रह्मारण्ये कर्पूरतिलको नाम हस्ती । तमवलोक्य सर्वे शृगालाश्चिन्तयन्ति स्म—'यद्ययं केनाप्युपायेन म्रियते तदास्माकमेतद्देहेन मासचतुष्टयस्य भोजनं भविष्यति' । तत्रैकेन वृद्धशृगालेन प्रतिज्ञातम्—'मया बुद्धिप्रभावादस्य मरणं साधयितव्यम् ।' अनन्तरं स वञ्चकः कर्पूरतिलकसमीपं गत्वा साष्टाङ्गपातं प्रणम्योवाच—'देव, दृष्टि-

---

ತಾ॥ ಯುಕ್ತಿಯಿಂದಾಗದ ಕಾರ್ಯವು ಶಕ್ತಿಯಿಂದಾಗುವುದಿಲ್ಲ. ಯುಕ್ತಿಯಿಂದಲೇ ನರಿಯು ಕೆಸರಿನ ದಾರಿಯಿಂದ ಹೋಗುತ್ತ ಆನೆಯನ್ನು ಕೊಂದಿತು.

೧೦. ಅ॥ ರಾಜಪುತ್ರಃ=ರಾಜಕುಮಾರನು, ಏತತ್=ಇದು, ಕಥಂ=ಹೇಗೆಂದು, ಪೃಚ್ಛತಿ = ಕೇಳುತ್ತಾನೆ. ಸಾ = ಅವಳು, ಕಥಯತಿ = ಹೇಳುತ್ತಾಳೆ.

## ಎಂಟನೆ ಕಥೆ

೧. ಅ॥ ಬ್ರಹ್ಮಾರಣ್ಯೇ=ಬ್ರಹ್ಮಾರಣ್ಯದಲ್ಲಿ, ಕರ್ಪೂರತಿಲಕಃ ನಾಮ=ಕರ್ಪೂರ ತಿಲಕವೆಂಬ, ಹಸ್ತೀ=ಆನೆಯು, ಅಸ್ತಿ=ಇತ್ತು. ತಂ=ಅದನ್ನು, ಅವಲೋಕ್ಯ=ನೋಡಿ, ಸರ್ವೇ=ಎಲ್ಲಾ, ಶೃಗಾಲಾಃ=ನರಿಗಳು, ಚಿಂತಯಂತಿ ಸ್ಮ=ಆಲೋಚಿಸಿದುವು. ಅಯಂ=ಈ ಆನೆಯು, ಕೇನ ಅಪಿ ಉಪಾಯೇನ=ಯಾವುದಾದರೂ ಯುಕ್ತಿಯಿಂದ, ಮ್ರಿಯತೇ ಯದಿ=ಸತ್ತದ್ದೇ ಆದರೆ, ತದಾ=ಆಗ, ಅಸ್ಮಾಕಂ=ನಮಗೆ, ಏತದ್ದೇಹೇನ=ಇದರ ಶರೀರದಿಂದ, ಮಾಸಚತುಷ್ಟಯಸ್ಯ=ನಾಲ್ಕು ತಿಂಗಳಿಗೆ, ಭೋಜನಂ=ಊಟವು, ಭವಿಷ್ಯತಿ=ಆಗುವುದು. ತತ್ರ=ಅವುಗಳ ನಡುವೆ, ಏಕೇನ=

प्रसादं कुरु ।' हस्ती ब्रूते—'कस्त्वम् कुतः समायातः ?' सोऽवदत्-'जम्बुकोऽहम् । सर्वैर्वनवासिभिः पशुभिः मिलित्वा भवत्सकाशं प्रस्थापितः यद्विना राज्ञा अवस्थातुं न युक्तम् तदत्राटवीराज्येऽभिषेक्तुं भवान् सर्वस्वामिगुणोपेतो निरूपितः । यतः ।

१. यः कुलाभिजनाचारैरतिशुद्धः प्रतापवान् ।
धार्मिको नीतिकुशलः स स्वामी युज्यते भुवि ॥ १९९ ॥

---

ಒಂದು, ವೃದ್ಧಶೃಗಾಲೇನ = ಮುದಿನರಿಯಿಂದ, ಪ್ರತಿಜ್ಞಾತಂ = ಪ್ರತಿಜ್ಞೆ ಮಾಡಲ್ಪಟ್ಟಿತು. ಮಯಾ = ನನ್ನಿಂದ, ಬುದ್ಧಿಪ್ರಭಾವಾತ್ = ಬುದ್ಧಿಯ ಸಾಮರ್ಥ್ಯದಿಂದ, ಅಸ್ಯ = ಈ ಆನೆಯ, ಮರಣಂ = ಸಾವು, ಸಾಧಯಿತವ್ಯಂ = ಸಾಧಿಸಬೇಕು. (ಉಂಟು ಮಾಡಬೇಕು). ಅನಂತರಂ = ಆಮೇಲೆ, ಸಃ ವಂಚಕಃ = ಆ ನರಿಯು, ಕರ್ಪೂರತಿಲಕಸಮೀಪಂ = ಕರ್ಪೂರತಿಲಕನ ಹತ್ತಿರಕ್ಕೆ, ಗತ್ವಾ = ಹೋಗಿ, ಸಾಷ್ಟಾಂಗಪಾತಂ ಪ್ರಣಮ್ಯ = ಸಾಷ್ಟಾಂಗನಮಸ್ಕಾರ ಮಾಡಿ, ಉವಾಚ = ಹೇಳಿತು. ದೇವ = ಸ್ವಾಮಿಯೆ ! ದೃಷ್ಟಿಪ್ರಸಾದಂ ಕುರು = ನನ್ನನ್ನು ನೋಡಿ ಅನುಗ್ರಹಿಸು. ಹಸ್ತೀ ಬ್ರೂತೇ = ಆನೆಯು ಹೇಳುತ್ತದೆ. ತ್ವಂ = ನೀನು, ಕಃ = ಯಾರು ? ಕುತಃ = ಎಲ್ಲಿಂದ, ಸಮಾಯಾತಃ = ಬಂದಿರುವೆ ? ಸಃ = ಆ ನರಿಯು, ಅವದತ್ = ಹೇಳಿತು. ಅಹಂ ಜಂಬುಕಃ = ನಾನು ನರಿ. ಸರ್ವೈಃ = ಎಲ್ಲ, ವನವಾಸಿಭಿಃ = ಕಾಡಿನಲ್ಲಿ ವಾಸಮಾಡುವ, ಪಶುಭಿಃ = ಮೃಗಗಳಿಂದ, ಮಿಲಿತ್ವಾ = ಒಟ್ಟುಕೂಡಿ, ಭವತ್ಸಕಾಶಂ = ನಿನ್ನ ಹತ್ತಿರಕ್ಕೆ, ಪ್ರಸ್ಥಾಪಿತಃ = ಕಳುಹಿಸಲ್ಪಟ್ಟಿರುವೆನು. ಯತ್ = ಯಾವ ಕಾರಣದಿಂದ, ರಾಜ್ಞಾ ವಿನಾ = ರಾಜನಿಲ್ಲದೆ, ಅವಸ್ಥಾತುಂ = ಇರುವುದಕ್ಕೆ, ನ ಯುಕ್ತಂ = ಉಚಿತವಲ್ಲವೊ. ತತ್ = ಆದ್ದರಿಂದ, ಅತ್ರ ಅಟವೀರಾಜ್ಯೇ = ಈ ಕಾಡಿನ ರಾಜ್ಯದಲ್ಲಿ, ಅಭಿಷೇಕ್ತುಂ = ಅಭಿಷೇಕ ಮಾಡುವುದಕ್ಕೆ, ಸರ್ವ = ಎಲ್ಲ, ಸ್ವಾಮಿ = ಒಡೆಯನ, ಗುಣೋಪೇತಃ = ಗುಣಗಳಿಂದ ಕೂಡಿದ, ಭವಾನ್ = ನೀನು, ನಿರೂಪಿತಃ = ಪರಿಶೀಲಿಸಲ್ಪಟ್ಟಿರುವಿ.

೧. ಅ॥ ಭುವಿ = ಪ್ರಪಂಚದಲ್ಲಿ, ಯಃ = ಯಾವನು, ಕುಲ = ವಂಶ,

೩. अपरं च पश्य ।

राजानं प्रथमं विन्देत्ततो भार्यां ततो धनम् ।
राजन्यसति लोकेऽस्मिन्कुतो भार्या कुतो धनम् ॥ २०० ॥

೪. अन्यच्च ।

पर्जन्य इव भूतानामाधारः पृथिवीपतिः ।
विकलेऽपि हि पर्जन्ये जीव्यते न तु भूपतौ ॥ २०१ ॥

---

ಅಭಿಜನ = ಪ್ರಖ್ಯಾತಿ, ಆಚಾರೈಃ = ನಡತೆ ಇವುಗಳಿಂದ, ಅತಿಶುದ್ಧಃ = ಅತ್ಯಂತ ಶುಚಿಯಾದವನೊ, ಪ್ರತಾಪವಾನ್ = ಪರಾಕ್ರಮುವುಳ್ಳವನೊ, ಧಾರ್ಮಿಕಃ = ಧರ್ಮಾಸಕ್ತನಾದವನೊ, ನೀತಿಕುಶಲಃ = ನೀತಿಯಲ್ಲಿ ಸಮರ್ಥನಾದವನೊ, ಸಃ = ಅವನು, ಸ್ವಾಮೀ = ಒಡೆಯನಾಗಲು, ಯುಜ್ಯತೇ = ಯೋಗ್ಯನಾಗುತ್ತಾನೆ.

ತಾ|| ಪ್ರಪಂಚದಲ್ಲಿ ಒಳ್ಳೆವಂಶ, ಪ್ರಖ್ಯಾತಿ, ಒಳ್ಳೆನಡತೆ, ಇವುಗಳಿಂದ ಶುದ್ಧನೂ, ಪರಾಕ್ರಮಶಾಲಿಯೂ, ಧರ್ಮನಿರತನೂ, ನೀತಿಯನ್ನು ಚೆನ್ನಾಗಿ ತಿಳಿದವನೂ ಆಗಿರುವವನೇ ರಾಜನಾಗಲು ಯೋಗ್ಯನು.

೩. ಅ|| ಅಪರಂ ಚ ಪಶ್ಯ = ಇನ್ನೊಂದನ್ನೂ ನೋಡು. ಪ್ರಥಮಂ = ಮೊದಲು, ರಾಜಾನಂ = ರಾಜನನ್ನು, ವಿಂದೇತ್ = ಹೊಂದಬೇಕು. ತತಃ = ಬಳಿಕ, ಭಾರ್ಯಾಂ = ಹೆಂಡತಿಯನ್ನು, ತತಃ = ಅನಂತರ, ಧನಂ = ಹಣವನ್ನು (ಪಡೆಯಬೇಕು) ರಾಜನಿ = ದೊರೆಯು, ಅಸ್ಮಿನ್ ಲೋಕೇ = ಈ ಲೋಕದಲ್ಲಿ, ಅಸತಿ = ಇಲ್ಲದಿರಲು, ಭಾರ್ಯಾ = ಹೆಂಡತಿಯು, ಕುತಃ = ಎಲ್ಲಿಂದ? ಧನಂ = ಹಣವು, ಕುತಃ = ಎಲ್ಲಿಂದ.

ತಾ|| ಹೆಂಡತಿ ಮತ್ತು ಹಣವನ್ನು ಪಡೆಯುವುದಕ್ಕಿಂತ ಮುಂಚೆ ದೊರೆಯನ್ನು ಪಡೆಯಬೇಕು. ಈ ಲೋಕದಲ್ಲಿ ದುಷ್ಟಶಿಕ್ಷಣ ಶಿಷ್ಟಪರಿಪಾಲನೆ ಮಾಡುವ ರಾಜನಿಲ್ಲದಿದ್ದರೆ ಹೆಂಡತಿ ಮತ್ತು ಹಣವು ಹೇಗೆ ಸುರಕ್ಷಿತವಾಗಿದ್ದೀತು.

೪. ಅ|| ಪೃಥವೀಪತಿಃ = ಭೂಮಿಗೆ ಒಡೆಯನಾದ ರಾಜನು, ಪರ್ಜನ್ಯಃ

ಶ. नियतविषयवर्ती प्रायशो दण्डयोगा-
जगति परवशेऽस्मिन्दुर्लभः साधुवृत्तः ।
कृशमपि विकलं वा व्याधितं वाधनं वा
पतिमपि कुलनारी दण्डभीत्याभ्युपैति ॥ २०२ ॥

ಇವ = ಮಳೆಯಂತೆ, ಭೂತಾನಾಂ = ಪ್ರಾಣಿಗಳಿಗೆ, ಆಧಾರಃ = ಆಶ್ರಯನು. ಪರ್ಜನ್ಯೇ = ಮಳೆಯು, ವಿಕಲೇ ಅಪಿ = ಇಲ್ಲದಿದ್ದರೂ, ಜೀವ್ಯತೇ = ಜೀವಿಸೋಣವಾಗುತ್ತದೆ: ಭೂಪತೌ ವಿಕಲೇ ನ ತು = ರಾಜನು ಇಲ್ಲದಿದ್ದರೆ ಬದುಕಲು ಸಾಧ್ಯವಿಲ್ಲ.

ತಾ॥ ಮಳೆಯು ಪ್ರಾಣಿಗಳಿಗೆ ಮುಖ್ಯವಾಗಿ ಬೇಕಾಗುವಂತೆ ರಾಜನೂ ಅತ್ಯಾವಶ್ಯಕವಾಗಿ ಬೇಕು. ಒಂದುವೇಳೆ ಮಳೆಯಿಲ್ಲದಿದ್ದರೂ ಪ್ರಾಣಿಗಳು ಜೀವಿಸುತ್ತವೆ. ರಾಜನಿಲ್ಲದಿದ್ದರೆ ಬದುಕುವುದೇ ಇಲ್ಲ.

ಶ. ಅ॥ ದಂಡಯೋಗಾತ್ = ಶಿಕ್ಷೆಯ ಸಂಬಂಧದಿಂದ, ಪರವಶೇ = ಪರಾಧೀನವಾದ, ಅಸ್ಮಿನ್ ಜಗತಿ = ಈ ಪ್ರಪಂಚದಲ್ಲಿ, ನಿಯತ = ನಿಶ್ಚಿತವಾದ, ವಿಷಯವರ್ತೀ = ದೇಶದಲ್ಲಿರುವ, ಸಾಧುವೃತ್ತಃ = ಒಳ್ಳೆ ನಡತೆಯುಳ್ಳ ಮನುಷ್ಯನು, ಪ್ರಾಯಶಃ = ಬಹಳಮಟ್ಟಿಗೆ, ದುರ್ಲಭಃ = ಸಿಕ್ಕುವುದು ಕಷ್ಟ. ಕುಲನಾರೀ ಅಪಿ = ಕುಲಾಂಗನೆಯೂ, ದಂಡಭೀತ್ಯಾ = ಶಿಕ್ಷೆಯ ಭಯದಿಂದ, ಕೃಶಂ ಅಪಿ = ಕೃಶಾಂಗನನ್ನಾಗಲಿ, ವಿಕಲಂ ವಾ = ಕುಂಟುಕುರುಡಾದವನನ್ನಾಗಲಿ, ವ್ಯಾಧಿತಂ ವಾ = ಕಾಯಿಲೆಯವನನ್ನಾಗಲಿ, ಅಧನಂ ವಾ = ಬಡವನನ್ನಾಗಲಿ, ಪತಿಂ = ಗಂಡನನ್ನಾಗಿ ಅಭ್ಯುಪೈತಿ = ಒಪ್ಪುತ್ತಾಳೆ.

ತಾ॥ ಈ ಜಗತ್ತು ಯಾವುದಾದರೂ ಶಿಕ್ಷೆಯ ಸಂಬಂಧವಿರುವುದರಿಂದ ಅಸ್ವತಂತ್ರವಾದುದು. ಇಂತಹ ಜಗತ್ತಿನಲ್ಲಿ ಒಂದೇ ದೇಶದಲ್ಲಿ ನೆಲೆಯಾಗಿ ನಿಂತು ಒಳ್ಳೆ ನಡತೆಯುಳ್ಳವನಾಗಿರುವ ಮನುಷ್ಯನು ದೊರೆಯುವುದು ಕಷ್ಟ. ಆದ್ದರಿಂದ ಕುಲೀನಸ್ತ್ರೀಯು ಗಂಡನು ಕೃಶನಾಗಿದ್ದರೂ, ವಿಕಲಾಂಗನಾಗಿದ್ದರೂ, ಕಾಯಿಲೆಯವನಾಗಿದ್ದರೂ, ಬಡವನಾಗಿದ್ದರೂ ಶಿಕ್ಷೆಯ ಹೆದರಿಕೆಯಿಂದ ಅವನನ್ನೇ ವರಿಸುವಳು.

९. तद्यथा लग्नवेला न विचलति तथा कृत्वा सत्वरं आगम्यतां देवेन।' इत्युक्त्वोत्थाय चलितः। ततोऽसौ राज्यलोभाकृष्टः कर्पूरतिलकः शृगाल-वर्त्मना धावन्महापङ्के निमग्नः। ततस्तेन हस्तिनोक्तम्—'सखे शृगाल, किमधुना विधेयम्। पङ्के निपतितोऽहं म्रिये। परावृत्य पश्य।' शृगालेन विहस्योक्तम्—'देव मम पुच्छकावलम्बनं कृत्वोत्तिष्ठ। यन्मद्विधस्य वचसि त्वया प्रत्ययः कृतस्तदनुभूयतामशरणं दुःखम्। तथा चोक्तम्—

---

೯ ಅ॥ ತತ್=ಆದ್ದರಿಂದ, ಯಥಾ=ಹೇಗೆ, ಲಗ್ನವೇಲಾ=ಮುಹೂರ್ತದ ಸಮಯವು, ನ ವಿಚಲತಿ = ವ್ಯತ್ಯಾಸವಾಗುವುದಿಲ್ಲವೊ. ತಥಾ ಕೃತ್ವಾ=ಹಾಗೆ ಮಾಡಿಕೊಂಡು, ದೇವೇನ=ಸ್ವಾಮಿಯಿಂದ, ಸತ್ವರಂ=ಜಾಗ್ರತೆಯಾಗಿ, ಆಗಮ್ಯತಾಂ = ಬರೋಣವಾಗಲಿ. ಇತಿ ಉಕ್ತ್ವಾ=ಹೀಗೆ ಹೇಳಿ, ಉತ್ಥಾಯ=ಎದ್ದು, ಚಲಿತಃ=ಹೊರಟಿತು. ತತಃ=ಬಳಿಕ, ರಾಜ್ಯಲೋಭ=ರಾಜ್ಯದ ಆಶೆಯಿಂದ, ಆಕೃಷ್ಟಃ=ಸೆಳೆಯಲ್ಪಟ್ಟ, ಅಸೌ ಕರ್ಪೂರತಿಲಕಃ = ಈ ಕರ್ಪೂರತಿಲಕನು, ಶೃಗಾಲವರ್ತ್ಮನಾ = ನರಿಯ ದಾರಿಯಿಂದ, ಧಾವನ್=ಓಡುತ್ತ, ಮಹಾಪಂಕೇ=ಹೆಚ್ಚಾದ ಕೆಸರಿನಲ್ಲಿ, ನಿಮಗ್ನಃ=ಹೂತುಹೋಯಿತು. ತತಃ=ಬಳಿಕ, ತೇನ=ಆ, ಹಸ್ತಿನಾ=ಆನೆಯಿಂದ, ಉಕ್ತಂ = ಹೇಳಲ್ಪಟ್ಟಿತು. ಸಖೇ ಶೃಗಾಲ = ಮಿತ್ರನಾದ ನರಿಯೆ. ಅಧುನಾ=ಈಗ, ಕಿಂ=ಏನು, ವಿಧೇಯಂ=ಮಾಡತಕ್ಕುದು. ಪಂಕೇ=ಕೆಸರಿನಲ್ಲಿ, ನಿಪತಿತಃ = ಬಿದ್ದ, ಅಹಂ = ನಾನು, ಮ್ರಿಯೇ=ಸಾಯುತ್ತೇನೆ. ಪರಾವೃತ್ಯ=ಹಿಂದಿರುಗಿ, ಪಶ್ಯ=ನೋಡು. ಶೃಗಾಲೇನ =ನರಿಯಿಂದ, ವಿಹಸ್ಯ=ನಕ್ಕು, ಉಕ್ತಂ = ಹೇಳಲ್ಪಟ್ಟಿತು. ದೇವ=ಸ್ವಾಮಿ,ಮಮ=ನನ್ನ, ಪುಚ್ಛಕಾವಲಂಬನಂ ಕೃತ್ವಾ = ಬಾಲವನ್ನು ಹಿಡಿದುಕೊಂಡು, ಉತ್ತಿಷ್ಠ = ಮೇಲಕ್ಕೇಳು. ಯತ್ = ಯಾವಕಾರಣದಿಂದ, ಮದ್ವಿಧಸ್ಯ=ನನ್ನಂತಹವನ, ವಚಸಿ=ಮಾತಿನಲ್ಲಿ, ತ್ವಯಾ=ನಿನ್ನಿಂದ, ಪ್ರತ್ಯಯಃ=ನಂಬಿಕೆಯು ಕೃತಃ=ಮಾಡಲ್ಪಟ್ಟಿತೊ. ತತ್=ಆದ್ದರಿಂದ,

೭. यदा सत्सङ्गरहितो भविष्यसि भविष्यसि ।
तदा सज्जनगोष्ठीषु पतिष्यसि पतिष्यसि' ॥ २०३ ॥

೮. ततो महापङ्के निमग्नो हस्ती शृगालैः भक्षितः । अतोऽहं ब्रवीमि—'उपायेन हि यच्छक्यं' इत्यादि ॥ ततः कुट्टन्युपदेशेन तं चारुदत्त-नामानं वणिक्पुत्रं स राजपुत्रः सेवकं चकार । ततोऽसौ तेन सर्वविश्वास-कार्येषु नियोजितः ।

---

ಅಶರಣಂ = ರಕ್ಷಣೆಯಿಲ್ಲದ, ದುಃಖಂ=ದುಃಖವು, ಅನುಭೂಯತಾಂ= ಅನುಭವಿಸಲ್ಪಡಲಿ, ತಥಾ ಚ ಉಕ್ತಂ= ಹಾಗೆಯೇ ಹೇಳಲ್ಪಟ್ಟಿದೆ.

೭. ಅ|| ಯದಾ=ಯಾವಾಗ, ಸತ್ಸಂಗರಹಿತಃ=ಒಳ್ಳೆ ಸಹವಾಸವಿಲ್ಲ ದವನು, ಭವಿಷ್ಯಸಿ ಭವಿಷ್ಯಸಿ=ನಿಶ್ಚಯವಾಗಿ ಆಗುತ್ತೀಯೊ; ತದಾ=ಆಗ, ಸಜ್ಜನಗೋಷ್ಠೀಷು = ಸಜ್ಜನರ ಸಭೆಗಳಲ್ಲಿ, ಪತಿಷ್ಯಸಿ ಪತಿಷ್ಯಸಿ = ನಿಜ ವಾಗಿಯೂ ತಪ್ಪಿಹೋಗುವಿ.

ತಾ|| ನೀನು ಒಳ್ಳೆಯವರ ಸಹವಾಸ ಮಾಡದಿದ್ದಲ್ಲಿ ಸಜ್ಜನರ ಸಭೆಯಲ್ಲಿ ನಿನ್ನನ್ನು ಸೇರಿಸಿಕೊಳ್ಳುವುದಿಲ್ಲ.

೮. ಅ|| ತತಃ = ಅನಂತರ, ಮಹಾಪಂಕೇ = ಹೆಚ್ಚಾದ ಕೆಸರಿನಲ್ಲಿ, ನಿಮಗ್ನಃ=ಹೂತುಹೋದ, ಹಸ್ತೀ=ಆನೆಯು, ಶೃಗಾಲೈಃ=ನರಿಗಳಿಂದ, ಭಕ್ಷಿತಃ = ತಿನ್ನಲ್ಪಟ್ಟಿತು. ಅತಃ = ಈ ಕಾರಣದಿಂದ, ಅಹಂ=ನಾನು, ಬ್ರವೀಮಿ = ಹೇಳುತ್ತೇನೆ. ಉಪಾಯೇನ ಹಿ ಯತ್ ಶಕ್ಯಂ ಇತ್ಯಾದಿ =ಯಾವುದು ಯುಕ್ತಿಯಿಂದ ಸಾಧ್ಯವೊ ಇತ್ಯಾದಿ. ತತಃ=ಬಳಿಕ, ಕುಟ್ಟ-ನ್ಯುಪದೇಶೇನ=ತಲೆಹಿಡಿಕಿಯ ಉಪದೇಶದಿಂದ, ಚಾರುದತ್ತನಾಮಾನಂ= ಚಾರುದತ್ತನೆಂದು ಹೆಸರುಳ್ಳ, ತಂ ವಣಿಕ್ಪುತ್ರಂ=ಆ ವೈಶ್ಯನ ಮಗನನ್ನು, ಸಃ=ಆ, ರಾಜಪುತ್ರಃ=ರಾಜಕುಮಾರನು, ಸೇವಕಂ=ಸೇವಕನನ್ನಾಗಿ, ಚಕಾರ=ಮಾಡಿದನು. ತತಃ=ಬಳಿಕ, ಅಸೌ=ಈ ಚಾರುದತ್ತನು, ತೇನ=

एकदा तेन राजपुत्रेण स्नातानुलिप्तेन कनकरत्नालङ्कारधारिणा प्रोक्तम्—'अद्यारभ्य मासमेकं गौरीव्रतं कर्तव्यम् । तदत्र प्रतिरात्रमेकां कुलीनां युवतीं आनीय समर्पय । सा मया यथोचितेन विधिना पूजयितव्या ।' ततः स चारुदत्तस्तथाविधां नवयुवतीमानीय समर्पयति । पश्चात्प्रच्छन्नः सन्किमयं करोतीति निरूपयति । स च तुङ्गबलस्तां युवतीमस्पृशन्नेव दूरादवस्त्रालङ्कारगन्धचन्दनैः सम्पूज्य रक्षकं दत्वा प्रस्थापयति ।

---

ಆ ತುಂಗಬಲನಿಂದ, ಸರ್ವ=ಎಲ್ಲಾ, ವಿಶ್ವಾಸಕಾರ್ಯೇಷು=ನಂಬಿಕೆಯ ಕೆಲಸಗಳಲ್ಲಿ, ನಿಯೋಜಿತಃ=ನೇಮಿಸಲ್ಪಟ್ಟನು.

ಏಕದಾ=ಒಂದಾನೊಂದು ವೇಳೆ, ಸ್ನಾತಾನುಲಿಪ್ತೇನ=ಸ್ನಾನಮಾಡಿ ಗಂಧವನ್ನು ಹಚ್ಚಿಕೊಂಡಿರುವ, ಕನಕ=ಚಿನ್ನ, ರತ್ನ=ರತ್ನ ಇವುಗಳ, ಅಲಂಕಾರ=ಒಡವೆಗಳನ್ನು, ಧಾರಿಣಾ=ಧರಿಸಿರುವ, ತೇನ=ಆ, ರಾಜಪುತ್ರೇಣ=ರಾಜಕುಮಾರನಿಂದ, ಪ್ರೋಕ್ತಂ=ಹೇಳಲ್ಪಟ್ಟಿತು ಅದ್ಯ ಆರಭ್ಯ =ಈದಿನ ಮೊದಲ್ಗೊಂಡು, ಏಕಂ = ಒಂದು, ಮಾಸಂ = ತಿಂಗಳು, ಗೌರೀವ್ರತಂ=ಗೌರೀವ್ರತವು, ಕರ್ತವ್ಯಂ=ಮಾಡಬೇಕು. ತತ್=ಆದ್ದರಿಂದ, ಅತ್ರ=ಇಲ್ಲಿಗೆ, ಪ್ರತಿರಾತ್ರಂ=ಪ್ರತಿದಿನ ರಾತ್ರಿ, ಏಕಾಂ=ಒಬ್ಬ, ಕುಲೀನಾಂ=ಸತ್ಕುಲದಲ್ಲಿ ಹುಟ್ಟಿದ, ಯುವತೀಂ ಆನೀಯ=ತರುಣಿಯನ್ನು ತಂದು, ಸಮರ್ಪಯ=ಒಪ್ಪಿಸು. ಸಾ=ಅವಳು, ಮಯಾ = ನನ್ನಿಂದ, ಯಥೋಚಿತೇನ ವಿಧಿನಾ=ಯೋಗ್ಯರೀತಿಯಿಂದ, ಪೂಜಯಿತವ್ಯಾ=ಪೂಜೆ ಮಾಡಲು ಯೊಗ್ಯಳು. ತತಃ=ಬಳಿಕ, ಸಃ ಚಾರುದತ್ತಃ=ಆ ಚಾರುದತ್ತನು, ತಥಾವಿಧಾಂ=ಅಂತಹ, ನವಯುವತೀಂ=ತರುಣಿಯನ್ನು, ಆನೀಯ=ಕರೆತಂದು, ಸಮರ್ಪಯತಿ=ಒಪ್ಪಿಸುತ್ತಾನೆ. ಪಶ್ಚಾತ್=ಅನಂತರ, ಪ್ರಚ್ಛನ್ನಃ ಸನ್=ಮರೆಯಾದವನಾಗಿ, ಅಯಂ=ಇವನು, ಕಿಂ ಕರೋತಿ ಇತಿ=ಏನನ್ನು ಮಾಡುತ್ತಾನೆ ಎಂದು, ನಿರೂಪಯತಿ=ಪರೀಕ್ಷಿಸುತ್ತಾನೆ. ಸಃ ಚ=ಆ, ತುಂಗಬಲಃ == ತುಂಗಬಲನು, ತಾಂ ಯುವತೀಂ=ಆ ತರುಣಿಯನ್ನು,

अथ वणिक्पुत्रेण तत् दृष्ट्वोपजातविश्वासेन लोभाकृष्टमनसा स्ववधूर्लावण्यवती समानीय समर्पिता। स च तुङ्गबलस्तां हृदयप्रियां लावण्यवतीं विज्ञाय ससम्भ्रममुत्थाय निर्भरमालिङ्ग्य निमीलिताक्षः पर्यङ्के तया सह विललास। तदालोक्य वणिक्पुत्रश्चित्रलिखित इवेति कर्तव्यतामूढः परं विषादमुपगतः। अतोऽहं ब्रवीमि—'स्वयं वीक्ष्य' इत्यादि॥ तथा त्वयापि

---

ಅಸ್ಪೃಶನ್ ಏವ = ಮುಟ್ಟದವನಾಗಿಯೇ, ದೂರಾತ್ = ದೂರದಿಂದ, ವಸ್ತ್ರ = ಬಟ್ಟೆ; ಅಲಂಕಾರ = ಒಡವೆ, ಗಂಧ = ಸುವಾಸನೆ ವಸ್ತು, ಚಂದನೈಃ = ಶ್ರೀಗಂಧ ಇವುಗಳಿಂದ, ಸಂಪೂಜ್ಯ = ಪೂಜಿಸಿ, ರಕ್ಷಕಂ ದತ್ವಾ = ಕಾವಲಿನವನನ್ನು ಕೊಟ್ಟು, ಪ್ರಸ್ಥಾಪಯತಿ = ಕಳುಹಿಸುತ್ತಾನೆ. ಅಥ = ಬಳಿಕ, ತತ್ ದೃಷ್ಟ್ವಾ = ಅದನ್ನು ನೋಡಿ, ಉಪಜಾತವಿಶ್ವಾಸೇನ = ಉಂಟಾದ ನಂಬಿಕೆಯುಳ್ಳ, ಲೋಭಾಕೃಷ್ಟಮನಸಾ = ಆಶೆಯಿಂದ ಸೆಳೆಯಲ್ಪಟ್ಟ ಮನಸ್ಸುಳ್ಳ, ವಣಿಕ್ಪುತ್ರೇಣ = ವೈಶ್ಯನ ಮಗನಾದ ಚಾರುದತ್ತನಿಂದ, ಸ್ವವಧೂಃ = ತನ್ನ ಹೆಂಡತಿಯಾದ, ಲಾವಣ್ಯವತೀ = ಲಾವಣ್ಯವತಿಯು, ಸಮಾನೀಯ = ಕರೆತಂದು, ಸಮರ್ಪಿತಾ = ಒಪ್ಪಿಸಲ್ಪಟ್ಟಳು. ಸ ಚ = ಆ, ತುಂಗಬಲಃ = ತುಂಗಬಲನು, ತಾಂ = ಅವಳನ್ನು, ಹೃದಯಪ್ರಿಯಾಂ = ಮನಸ್ಸಿಗೆ ಪ್ರಿಯಳಾದ, ಲಾವಣ್ಯವತೀಂ = ಲಾವಣ್ಯವತಿಯನ್ನಾಗಿ, ವಿಜ್ಞಾಯ = ತಿಳಿದು, ಸಸಂಭ್ರಮಂ = ಸಡಗರದಿಂದ, ಸಹಿತವಾಗಿ, ಉತ್ಥಾಯ = ಮೇಲಕ್ಕೆದ್ದು, ನಿರ್ಭರಂ = ಘಟ್ಟಿಯಾಗಿ, ಆಲಿಂಗ್ಯ = ತಬ್ಬಿಕೊಂಡು, ನಿಮೀಲಿತಾಕ್ಷಃ = ಕಣ್ಣನ್ನು ಮುಚ್ಚಿಕೊಂಡವನಾಗಿ, ಪರ್ಯಂಕೇ = ಹಾಸಿಗೆಯಲ್ಲಿ, ತಯಾ ಸಹ = ಅವಳೊಡನೆ, ವಿಲಲಾಸ = ರಮಿಸಿದನು. ತದಾಲೋಕ್ಯ = ಅದನ್ನು ಕಂಡು, ವಣಿಕ್ಪುತ್ರಃ = ವೈಶ್ಯನ ಮಗನು, ಚಿತ್ರಲಿಖಿತಃ ಇವ = ಚಿತ್ರದಲ್ಲಿ ಬರೆಯಲ್ಪಟ್ಟವನಂತೆ, ಇತಿಕರ್ತವ್ಯತಾಮೂಢಃ = ಏನನ್ನು ಮಾಡಬೇಕೆಂಬುದನ್ನು ತಿಳಿಯದಿದ್ದವನಾಗಿ, ಪರಂ = ಹೆಚ್ಚಾದ, ವಿಷಾದಂ = ವ್ಯಥೆಯನ್ನು, ಉಪಗತಃ = ಹೊಂದಿದನು. ಅತಃ = ಈ ಕಾರಣದಿಂದ, ಅಹಂ = ನಾನು, ಬ್ರವೀಮಿ = ಹೇಳುತ್ತೇನೆ. ಸ್ವಯಂ ವೀಕ್ಷ್ಯ ಇತ್ಯಾದಿ = ತಾನೇ ನೋಡಿ ಮೊದಲಾದುವನ್ನು, ತ್ವಯಾ

भवितव्यम्' इति। तद्धितवचनमवधीर्य महता भयेन विमुग्ध इव तं जलाशयमुत्सृज्य मन्थरश्चलितः। तेऽपि हिरण्यकादयः स्नेहादनिष्टं शङ्कमाना मन्थरमनुगच्छन्ति। ततः स्थले गच्छन्केनापि व्याधेन काननं पर्यटता मन्थरः प्राप्तः। प्राप्य तं गृहीत्वा उत्थाप्य धनुषि बद्ध्वा भ्रमन् क्लेशात् क्षुत्पिपासाकुलः स्वगृहाभिमुखं चलितः। अथ मृगवायसमूषिकाः परं विषादं गच्छन्तस्तमनुजग्मुः। ततो हिरण्यको विलपति—

---

ಅಪಿ = ನಿನ್ನಿಂದಲೂ, ತಥಾ = ಹಾಗೆಯೇ, ಭವಿತವ್ಯಂ ಇತಿ = ಆಗಬೇಕು ಎಂದು. ತದ್ಧಿತವಚನಂ = ಅದರ ಹಿತವಾದ ಮಾತನ್ನು, ಅವಧೀರ್ಯ = ಮೀರಿ, ಮಹತಾ ಭಯೇನ = ಹೆಚ್ಚಾದ ಹೆದರಿಕೆಯಿಂದ, ವಿಮುಗ್ಧಃ ಇವ = ಮೂಢನಾದವನಂತೆ, ಮಂಥರಃ = ಆಮೆಯು, ತಂ = ಆ, ಜಲಾಶಯಂ = ಕೊಳವನ್ನು, ಉತ್ಸೃಜ್ಯ = ಬಿಟ್ಟು, ಚಲಿತಃ = ಹೊರಟಿತು. ತೇ = ಆ, ಹಿರಣ್ಯಕಾದಯಃ = ಹಿರಣ್ಯಕವೆಂಬ ಇಲಿಯೇ ಮೊದಲಾದುವುಗಳು, ಸ್ನೇಹಾತ್ = ಪ್ರೀತಿಯಿಂದ, ಅನಿಷ್ಟಂ = ಕೆಟ್ಟದ್ದನ್ನು, ಶಂಕಮಾನಾಃ = ಊಹಿಸುವುವುಗಳಾಗಿ, ಮಂಥರಂ = ಆಮೆಯನ್ನು, ಅನುಗಚ್ಛಂತಿ = ಹಿಂಬಾಲಿಸುತ್ತವೆ. ತತಃ = ಬಳಿಕ, ಸ್ಥಲೇ = ನೆಲದಮೇಲೆ, ಗಚ್ಛನ್ = ಹೋಗುತ್ತಿರುವ, ಮಂಥರಃ = ಆಮೆಯು, ಕಾನನಂ ಪರ್ಯಟತಾ = ಕಾಡಿನಲ್ಲಿ ಸಂಚರಿಸುತ್ತಿರುವ, ಕೇನ ಅಪಿ ವ್ಯಾಧೇನ = ಯಾವನೊ ಒಬ್ಬ ಬೇಡನಿಂದ, ಪ್ರಾಪ್ತಃ = ಹೊಂದಲ್ಪಟ್ಟಿತು. ಪ್ರಾಪ್ಯ = ಹೊಂದಿ, ತಂ = ಅದನ್ನು, ಗೃಹೀತ್ವಾ = ಹಿಡಿದುಕೊಂಡು, ಉತ್ಥಾಪ್ಯ = ಮೇಲಕ್ಕೆ ಎತ್ತಿ, ಧನುಷಿ = ಬಿಲ್ಲಿನಲ್ಲಿ, ಬದ್ಧ್ವಾ = ಕಟ್ಟಿ, ಭ್ರಮನ್ = ಸುತ್ತುತ್ತ, ಕ್ಲೇಶಾತ್ = ಆಯಾಸದಿಂದ, ಕ್ಷುತ್ಪಿಪಾಸಾ = ಹಸಿವು ಬಾಯಾರಿಕೆಯಿಂದ, ಆಕುಲಃ = ವ್ಯಥೆಗೊಂಡವನಾಗಿ, ಸ್ವ = ತನ್ನ; ಗೃಹಾಭಿಮುಖಂ = ಮನೆಗೆ, ಎದುರಾಗಿ, ಚಲಿತಃ = ಹೊರಟನು. ಅಥ = ಬಳಿಕ, ಮೃಗ = ಜಿಂಕೆ, ವಾಯಸ = ಕಾಗೆ, ಮೂಷಿಕಾಃ = ಇಲಿ ಇವುಗಳು, ಪರಂ = ಹೆಚ್ಚಾದ, ವಿಷಾದಂ = ವ್ಯಸನವನ್ನು, ಗಚ್ಛಂತಃ = ಹೊಂದಿದವುಗಳಾಗಿ

९. 'एकस्य दुःखस्य न यावदन्तं
गच्छाम्यहं पारमिवार्णवस्य ।
तावद्द्वितीयं समुपस्थितं मे
छिद्रेष्वनर्था बहुलीभवन्ति ॥ २०४ ॥

൧೦. स्वाभाविकं तु यन्मित्रं भाग्येनैवोपजायते ।
तदकृत्रिमसौहार्दमापत्स्वपि न मुञ्चति ॥ २०५ ॥

---

ತಂ=ಆ ಬೇಡನನ್ನು, ಅನುಜಗ್ಮುಃ=ಹಿಂಬಾಲಿಸಿದುವು. ತತಃ=ಬಳಿಕ, ಹಿರಣ್ಯಕಃ=ಇಲಿಯು, ವಿಲಪತಿ=ಗೋಳಾಡುತ್ತದೆ.

೯. ಅ॥ ಅಹಂ=ನಾನು, ಏಕಸ್ಯ=ಒಂದು, ದುಃಖಸ್ಯ=ಕಷ್ಟದ, ಅಂತಂ=ಕೊನೆಯನ್ನು, ಅರ್ಣವಸ್ಯ=ಸಮುದ್ರದ, ಪಾರಂ ಇವ=ಆಚೆ ದಡದಂತೆ, ಯಾವತ್=ಎಷ್ಟರಲ್ಲಿ, ನ ಗಚ್ಛಾಮಿ=ಹೊಂದುವುದಿಲ್ಲವೊ, ತಾವತ್=ಅಷ್ಟರಲ್ಲಿ, ಮೇ=ನನಗೆ, ದ್ವಿತೀಯಂ=ಎರಡನೆ ದುಃಖವು, ಸಮುಪಸ್ಥಿತಂ=ಸಮೀಪಿಸಿತು. ಛಿದ್ರೇಷು=ಕಷ್ಟಗಳಲ್ಲಿ, ಅನರ್ಥಾಃ=ಅನಿಷ್ಟಗಳು, ಬಹುಲೀಭವಂತಿ=ಹೆಚ್ಚಾಗುತ್ತವೆ.

ತಾ॥ ರಾಜನ ದಿಗ್ವಿಜಯದಿಂದುಂಟಾದ ಕಷ್ಟವನ್ನು ತಪ್ಪಿಸಿಕೊಳ್ಳುವುದು ಸಮುದ್ರದ ಮತ್ತೊಂದು ದಡವನ್ನು ಸೇರಿದಂತೆಯೇ ಆಗಿದೆ. ಹೀಗೆ ಒಂದು ಕಷ್ಟವನ್ನು ತಪ್ಪಿಸಿಕೊಳ್ಳುತ್ತಿರುವಾಗಲೆ ಮಿತ್ರನಾದ ಆಮೆಯನ್ನು ಬೇಡನು ಹಿಡಿದುಕೊಂಡನು. ಹೀಗೆ ಒಂದು ಆಪತ್ತು ಒದಗಿದರೆ ಅದರ ಮೇಲೆ ಮತ್ತ ಮತ್ತೂ ಆಪತ್ತುಗಳು ಬರುತ್ತಿರುವುವು

೧೦. ಅ॥ ಯತ್=ಯಾವನು, ಸ್ವಾಭಾವಿಕಂ ಮಿತ್ರಂ=ಸ್ವಭಾವ ಸಿದ್ಧನಾದ ಸ್ನೇಹಿತನೊ (ಅವನು) ಭಾಗ್ಯೇನೈವ=ಅದೃಷ್ಟದಿಂದಲೇ, ಉಪಜಾಯತೇ=ಉಂಟಾಗುತ್ತಾನೆ. ಅಕೃತ್ರಿಮಸೌಹಾರ್ದಂ=ಸ್ವಾಭಾವಿಕ ಸ್ನೇಹವುಳ್ಳ, ತತ್=ಆ ಮಿತ್ರನು, ಆಪತ್ಸು ಅಪಿ=ಕಷ್ಟಗಳಲ್ಲಿಯೂ, ನ ಮುಂಚತಿ=ಬಿಡುವುದಿಲ್ಲ.

೧೧. न मातरि न दारेषु न सोदर्ये न चात्मजे ।
विश्वासस्तादृशः पुंसां यादृङ्मित्रे स्वभावजे' ॥ २०६ ॥

೧೨. इति मुहुर्विचिन्त्य 'अहो दुर्दैवम् । यतः ।

೧೩. स्वकर्मसन्तानविचेष्टितानि
कालान्तरावर्तिशुभाशुभानि ।
इहैव दृष्टानि मयैव तानि
जन्मान्तराणीव दशान्तराणि ॥ २०७ ॥

---

ತಾ॥ ಯಾವವೊಂದು ಕಾರಣವಿಲ್ಲದೆಯೇ ಸ್ನೇಹಿತನು ದೊರೆಯುವುದು ಅದೃಷ್ಟದಿಂದಲೇ. ಹಾಗೆ ಸ್ವಭಾವದಿಂದಲೇ ಮಿತ್ರನಾದವನು ಕಷ್ಟಕಾಲ ದಲ್ಲಿಯೂ ಗೆಳೆಯನನ್ನು ಬಿಡುವುದಿಲ್ಲ.

೧೧. ಅ॥ ಪುಂಸಾಂ=ಮನುಷ್ಯರಿಗೆ, ಸ್ವಭಾವಜೇ ಮಿತ್ರೇ=ಸ್ವಭಾವಸಿದ್ಧ ನಾದ ಸ್ನೇಹಿತನಲ್ಲಿ, ಯಾದೃಕ್=ಎಂತಹ, ವಿಶ್ವಾಸಃ = ನಂಬಿಕೆಯೊ, ತಾದೃಶಃ=ಅಂತಹ ನಂಬಿಕೆಯು, ಮಾತರಿ=ತಾಯಿಯಲ್ಲಿ, ನ=ಇಲ್ಲ. ದಾರೇಷು=ಹೆಂಡತಿಯಲ್ಲಿ, ನ, ಸೋದರ್ಯೇ=ಸಹೋದರನಲ್ಲಿ, ನ, ಆತ್ಮಜೇ ಮಗನಲ್ಲಿ, ನ= ಇಲ್ಲ.

ತಾ॥ ಮನುಷ್ಯರಿಗೆ ಸ್ವಭಾವದಿಂದಲೇ ಮಿತ್ರನಾದವನಲ್ಲಿರುವಷ್ಟು ವಿಶ್ವಾ ಸವು ತಾಯಿ, ಹೆಂಡತಿ, ಸಹೋದರ, ಮಗ ಇವರಲ್ಲಿ ಇರುವುದಿಲ್ಲ.

೧೨. ಅ॥ ಇತಿ=ಹೀಗೆಂದು, ಮುಹುಃ=ಬಾರಿಬಾರಿಗೂ, ವಿಚಿಂತ್ಯ= ಆಲೋಚಿಸಿ, ದುರ್ದೈವಂ=ದುರದೃಷ್ಟವು, ಅಹೋ=ಆಶ್ಚರ್ಯ. ಯತಃ= ಯಾವ ಕಾರಣದಿಂದ.

೧೩ ಅ॥ ಸ್ವಕರ್ಮ = ತನ್ನ ಕರ್ಮಗಳ, ಸಂತಾನ = ಸಮೂಹಗಳ, ವಿಚೇಷ್ಟಿತಾನಿ = ವ್ಯಾಪಾರಗಳು, ಕಾಲಾಂತರ = ಬೇರೆ ಸಮಯಗಳಲ್ಲಿ, ಆವರ್ತಿ=ಆವೃತ್ತಿಯಾಗುವ,ಶುಭಾಶುಭಾನಿ=ಮಂಗಳಾಮಂಗಳಗಳುಳ್ಳವು.

೧೪. अथ वेत्थमेवैतत् ।

**कायस्सन्निहितापायः सम्पदः पदमापदाम् ।**
**समागमाः सापगमाः सर्वमुत्पादि भङ्गुरम्' ॥ २०८ ॥**

೧೫. पुनर्विमृश्याह–

**'शोकारातिभयत्राणं प्रीतिविश्रम्भभाजनम् ।**
**केन रत्नमिदं सृष्टं मित्रमित्यक्षरद्वयम् ॥ २०९ ॥**

---

ತಾನಿ=ಅವುಗಳು, ಮಯ್ಯೈವ=ನನ್ನಿಂದಲೇ, ಇಹೈವ=ಈ ಜನ್ಮದಲ್ಲಿಯೇ, ಜನ್ಮಾಂತರಾಣಿ=ಇತರ ಜನ್ಮಗಳ, ದಶಾಂತರಾಣೀವ = ಬೇರೆ ಅವಸ್ಥೆಗಳಂತೆ, ದೃಷ್ಟಾನಿ=ನೋಡಲ್ಪಟ್ಟುವು.

ತಾ॥ ಈಗ ಮಾಡಿದ ಕರ್ಮಗಳಿಂದ ಶುಭಾಶುಭ ಫಲಗಳು ಬೇರೆ ಕಾಲದಲ್ಲಿ ಒದಗುವುವು. ಆದರೆ ಜನ್ಮಾಂತರದ ಅವಸ್ಥೆಗಳಂತಿರುವ ಅವುಗಳನ್ನು ನಾನು ಇಲ್ಲಿಯೇ ನೋಡಿದೆನು.

೧೪. ಅ॥ ಅಥ ವಾ=ಹಾಗಲ್ಲದ ಪಕ್ಷಕ್ಕೆ, ಏತತ್=ಇದು, ಇತ್ಥಂ ಏವ =ಹೀಗೆಯೇ. ಕಾಯಃ=ದೇಹವು, ಸನ್ನಿಹಿತಾಪಾಯಃ=ಸಮೀಪಿಸಿದ ಆಪತ್ತುಳ್ಳುದು. ಸಂಪದಃ=ಸಂಪತ್ತುಗಳು, ಆಪದಾಂ=ಆಪತ್ತುಗಳಿಗೆ,ಪದಂ =ಆಶ್ರಯವಾದುದು. ಸಮಾಗಮಾಃ=ಬರತಕ್ಕವು, ಸಾಪಗಮಾಃ=ಹೋಗತಕ್ಕವು. ಉತ್ಪಾದಿ=ಉಂಟಾಗತಕ್ಕ, ಸರ್ವಂ=ಎಲ್ಲವೂ, ಭಂಗುರಂ=ನಾಶವಾಗುವುವು.

ತಾ॥ ಈ ದೇಹಕ್ಕೆ ಅಪಾಯವು ಯಾವಾಗಲೂ ಸಮೀಪಿಸಿರುವುದು. ಐಶ್ವರ್ಯದಿಂದ ಆಪತ್ತು ಒದಗುವುದು. ಬರತಕ್ಕ ಶ್ರೇಯಸ್ಸೆಲ್ಲ ಹಾಗೆಯೇ ಹೋಗುವುದು. ಹುಟ್ಟಿದ್ದೆಲ್ಲ ನಾಶವಾಗತಕ್ಕುದು.

೧೫ ಅ॥ ಪುನಃ=ತಿರುಗಿ, ವಿಮೃಶ್ಯ=ಆಲೋಚಿಸಿ, ಆಹ=ಹೇಳಿತು. ಶೋಕ=ದುಃಖ, ಆರಾತಿ=ಶತ್ರು, ಭಯ=ಹೆದರಿಕೆ ಇವುಗಳಿಂದ, ತ್ರಾಣಂ

೧೬. किं च ।

मित्रं प्रीतिरसायनं नयनयोरानन्दनं चेतसः
पात्रं यत्सुखदुःखयोः सह भवेन्मित्रेण तद्दुर्लभम् ।
ये चान्ये सुहृदः समृद्धिसमये द्रव्याभिलाषाकुलाः
ते सर्वत्र मिलन्ति तत्त्वनिकषग्रावा तु तेषां विपत् ॥

---

ಕಾಪಾಡುವ, ಪ್ರೀತಿ = ಸ್ನೇಹ, ವಿಶ್ರಂಭ = ವಿಶ್ವಾಸ ಇವುಗಳಿಗೆ, ಭಾಜನಂ = ಆಶ್ರಯವಾದ, ಮಿತ್ರಂ ಇತಿ = ಮಿತ್ರನೆಂಬ, ಅಕ್ಷರದ್ವಯಂ = ಎರಡು ಅಕ್ಷರವುಳ್ಳ, ಇದಂ = ಈ, ರತ್ನಂ = ರತ್ನವು, ಕೇನ = ಯಾರಿಂದ, ಸೃಷ್ಟಂ = ಸೃಷ್ಟಿಸಲ್ಪಟ್ಟಿದೆ.

ತಾ॥ ಮಿತ್ರ ಎಂದು ಎರಡು ಅಕ್ಷರಗಳುಳ್ಳ ಈ ರತ್ನವು ದುಃಖ, ಶತ್ರು, ಹೆದರಿಕೆ ಇವುಗಳಿಂದ ಕಾಪಾಡತಕ್ಕುದು. ಪ್ರೀತಿ, ನಂಬಿಕೆ ಇವುಗಳಿಗೆ ಆಶ್ರಯವಾದುದು. ಇದನ್ನು ಯಾರು ಸೃಷ್ಟಿಸಿದರು.

೧೬. ಅ॥ ಮಿತ್ರಂ = ಸ್ನೇಹಿತನು, ನಯನಯೋಃ = ಕಣ್ಣುಗಳಿಗೆ, ಪ್ರೀತಿ-ರಸಾಯನಂ = ಸ್ನೇಹವೆಂಬ ರಸಕ್ಕೆ ಆಶ್ರಯನು. ಚೇತಸಃ = ಮನಸ್ಸಿಗೆ, ಆನಂದನಂ = ಸಂತೋಷವನ್ನುಂಟು ಮಾಡುವವನು. ಮಿತ್ರೇಣ ಸಹ = ಸ್ನೇಹಿತನೊಡನೆ ಇರುವಿಕೆಯಿಂದ, ಯತ್ ಮಿತ್ರಂ = ಯಾವ ಸ್ನೇಹಿತನು, ಸುಖದುಃಖಯೋಃ ಪಾತ್ರಂ ಭವೇತ್ = ಸುಖದುಃಖಗಳಿಗೆ ವಿಷಯನಾಗುವನೊ; ತತ್ = ಅಂತಹ ಸ್ನೇಹಿತನು, ದುರ್ಲಭಂ = ಸಿಕ್ಕುವುದು ಕಷ್ಟ. ಸಮೃದ್ಧಿಸಮಯೇ = ಐಶ್ವರ್ಯದ ಸಮೃದ್ಧಿಯಿರುವ ಸಮಯದಲ್ಲಿ, ದ್ರವ್ಯಾಭಿ-ಲಾಷಾಕುಲಾಃ = ಹಣದ ಆಶೆಯಿಂದ ತವಕಗೊಂಡಿರುವ, ಯೇ ಚ ಅನ್ಯೇ ಸುಹೃದಃ = ಯಾವ ಇತರ ಮಿತ್ರರೋ; ತೇ = ಅಂತಹ ಸ್ನೇಹಿತರು, ಸರ್ವತ್ರ = ಎಲ್ಲೆಡೆಯಲ್ಲಿಯೂ, ಮಿಲಂತಿ = ಒಟ್ಟು ಸೇರುತ್ತಾರೆ (ಸಿಗುತ್ತಾರೆ), ತೇಷಾಂ = ಅವರಿಗೆ, ತತ್ತ್ವ = ನಿಜಸ್ಥಿತಿಯನ್ನು, ನಿಷಕಗ್ರಾವಾ = ಒರೆಹಚ್ಚುವ ಕಲ್ಲು, ವಿಪತ್ = ಆಪತ್ತು.

೧೭. इति बहु विलप्य हिरण्यकश्चित्राङ्गलघुपतनकावाह—'यावदयं व्याधो वनान्न निस्सरति तावन्मन्थरं मोचयितुं यत्नः क्रियताम्'। तावूचतु :—'सत्वरं कार्यमुच्यताम् ।' हिरण्यको ब्रूते—'चित्राङ्गो जल-समीपं गत्वा मृतमिवात्मानं दर्शयतु। काकश्च तस्योपरि स्थित्वा चञ्च्वा किमपि विलिखतु। नूनमनेन लुब्धकेन तत्र कच्छपं परित्यज्य

---

ತಾ॥ ನೋಡಿದೊಡನೆ ಕಣ್ಣುಗಳಿಗೆ ಆನಂದವನ್ನುಂಟುಮಾಡುವವರೂ, ಮನಸ್ಸಿಗೆ ಉಲ್ಲಾಸವನ್ನುಂಟುಮಾಡುವವರೂ, ಸುಖದುಃಖಗಳಿಗೆ ನೆರವಾಗುವವರೂ ಮಿತ್ರರೆನ್ನಿಸಿಕೊಳ್ಳುವರು. ಇಂತಹ ಸ್ನೇಹಿತರು ದೊರೆಯುವುದು ಕಷ್ಟ. ಸಂಪತ್ತಿರುವಾಗ ಹಣವನ್ನು ಪಡೆಯಲು ಹತ್ತಿರ ಬರುವ ಸ್ನೇಹಿತರನ್ನು ಆಪತ್ತು ಒದಗಿದಾಗ ಹೇಗೆ ನಡೆದುಕೊಳ್ಳುವರೆಂದು ಚಿನ್ನವನ್ನು ಒರೆಗಲ್ಲಿನಲ್ಲಿ ಒರೆಯಿಟ್ಟು ನಿಶ್ಚಯಿಸುವಂತೆ ಪರೀಕ್ಷಿಸಬೇಕಾಗುವುದು. ಎಂದರೆ ಮಿತ್ರರಿಗೆ ಆಪತ್ತೇ ಒರೆಗಲ್ಲು.

೧೭. ಅ॥ ಹಿರಣ್ಯಕಃ = ಹಿರಣ್ಯಕನು, ಇತಿ = ಈ ರೀತಿ, ಬಹು ವಿಲಪ್ಯ = ಬಹಳ ಗೋಳಾಡಿ, ಚಿತ್ರಾಂಗಲಘುಪತನಕೌ = ಚಿತ್ರಾಂಗ ಮತ್ತು ಲಘುಪತನಕರನ್ನು ಕುರಿತು, ಆಹ = ಹೇಳಿತು. ಯಾವತ್ = ಎಷ್ಟರಲ್ಲಿ, ಅಯಂ ವ್ಯಾಧಃ = ಈ ಬೇಡನು, ವನಾತ್ = ಕಾಡಿನಿಂದ, ನ ನಿಸ್ಸರತಿ = ಹೊರಡುವುದಿಲ್ಲವೊ, ತಾವತ್ = ಅಷ್ಟರಲ್ಲಿ, ಮಂಥರಂ = ಆಮೆಯನ್ನು, ಮೋಚಯಿತುಂ = ಬಿಡಿಸುವುದಕ್ಕೆ, ಯತ್ನಃ = ಪ್ರಯತ್ನವು, ಕ್ರಿಯತಾಂ = ಮಾಡಲ್ಪಡಲಿ. ತೌ = ಆ ಚಿತ್ರಾಂಗಲಘುಪತನಕರು, ಊಚತುಃ = ಹೇಳಿದರು. ಸತ್ವರಂ = ಬೇಗನೆ, ಕಾರ್ಯಂ = ಕೆಲಸವು, ಉಚ್ಯತಾಂ = ಹೇಳಲ್ಪಡಲಿ. ಹಿರಣ್ಯಕಃ = ಹಿರಣ್ಯಕನು, ಬ್ರೂತೇ = ಹೇಳುತ್ತಾನೆ. ಚಿತ್ರಾಂಗಃ = ಚಿತ್ರಾಂಗನು, ಜಲಸಮೀಪಂ = ನೀರಿನ ಹತ್ತಿರಕ್ಕೆ, ಗತ್ವಾ = ಹೋಗಿ, ಆತ್ಮಾನಂ = ತನ್ನನ್ನು, ಮೃತಂ ಇವ = ಸತ್ತವನಂತೆ, ದರ್ಶಯತು = ತೋರಿಸಲಿ. ಕಾಕಃ ಚ = ಕಾಗೆಯೂ, ತಸ್ಯ = ಆ ಮೃಗದ, ಉಪರಿ = ಮೇಲೆ, ಸ್ಥಿತ್ವಾ = ಇದ್ದು, ಚಂಚ್ವಾ = ಕೊಕ್ಕಿನಿಂದ, ಕಿಂ ಅಪಿ = ಏನನ್ನೊ, ವಿಲಿಖತು = ಕೆರೆಯಲಿ. ನೂನಂ =

मृगमांसार्थिना सत्वरं गन्तव्यम् । ततोऽहं मन्थरस्य बन्धनं छेत्स्यामि । सन्निहिते लुब्धके भवद्भ्यां पलायितव्यम् ।' चित्राङ्गलघुपतनकाभ्यां शीघ्रं गत्वा तथा अनुष्ठिते स व्याधः श्रान्तः पानीयं पीत्वा तरोरधस्तात् उपविष्टस्तथाविधं मृगमपश्यत्।ततः कर्तरिकामादाय प्रहृष्टमना मृगान्तिकं चलितः। तत्रान्तरे हिरण्यकेनागत्य मन्थरस्य बन्धनं छिन्नम् । स कूर्मः सत्वरं जलाशयं प्रविवेश । स मृग आसन्नं तं व्याधं विलोक्योत्थाय पलायितः ।

---

ನಿಶ್ಚಯವಾಗಿಯೂ, ಮೃಗಮಾಂಸಾರ್ಥಿನಾ = ಜಿಂಕೆಯ ಮಾಂಸವನ್ನು ಅಪೇಕ್ಷಿಸುವ,¦ಅನೇನ ಲುಬ್ಧಕೇನ = ಈ ಬೇಡನಿಂದ, ತತ್ರ = ಅಲ್ಲಿ, ಕಚ್ಛಪಂ = ಆಮೆಯನ್ನು, ಪರಿತ್ಯಜ್ಯ = ಬಿಟ್ಟು, ಸತ್ವರಂ = ಬೇಗನೆ, ಗಂತವ್ಯಂ = ಹೋಗತಕ್ಕದು. ತತಃ = ಬಳಿಕ, ಅಹಂ = ನಾನು, ಮಂಥರಸ್ಯ = ಮಂಥರಕನ, ಬಂಧನಂ = ಕಟ್ಟನ್ನು, ಛೇತ್ಸ್ಯಾಮಿ = ಕತ್ತರಿಸುವೆನು. ಲುಬ್ಧಕೇ = ಬೇಡನು, ಸನ್ನಿಹಿತೇ = ಸಮೀಪಿಸಲು, ಭವದ್ಭ್ಯಾಂ = ನಿಮ್ಮಿಂದ, ಪಲಾಯಿತವ್ಯಂ = ಓಡತಕ್ಕದು. ಚಿತ್ರಾಂಗಲಘುಪತನಕಾಭ್ಯಾಂ = ಚಿತ್ರಾಂಗಲಘುಪತನಕರಿಂದ, ಶೀಘ್ರಂ ಗತ್ವಾ = ಬೇಗನೆ ಹೋಗಿ, ತಥಾ = ಹಾಗೆ, ಅನುಷ್ಠಿತೇ ಸತಿ = ಮಾಡಲ್ಪಡಲು, ಸ ವ್ಯಾಧಃ = ಆ ಬೇಡನು, ಶ್ರಾಂತಃ = ಬಳಲಿದವನಾಗಿ, ಪಾನೀಯಂ = ನೀರನ್ನು, ಪೀತ್ವಾ = ಕುಡಿದು, ತರೋಃ = ಮರದ, ಅಧಸ್ತಾತ್ = ಕೆಳಗೆ, ಉಪವಿಷ್ಟಃ = ಕೂತವನಾಗಿ, ತಥಾವಿಧಂ = ಅಂತಹ, ಮೃಗಂ = ಜಿಂಕೆಯನ್ನು, ಅಪಶ್ಯತ್ = ನೋಡಿದನು. ತತಃ = ಬಳಿಕ, ಕರ್ತರಿಕಾಂ = ಕತ್ತರಿಯನ್ನು, ಆದಾಯ = ತೆಗೆದುಕೊಂಡು, ಪ್ರಹೃಷ್ಟಮನಾಃ = ಸಂತೋಷಗೊಂಡ ಮನಸ್ಸುಳ್ಳವನಾಗಿ, ಮೃಗಾಂತಿಕಂ = ಜಿಂಕೆಯ ಹತ್ತಿರಕ್ಕೆ, ಚಲಿತಃ = ಹೊರಟನು. ತತ್ರಾಂತರೇ = ಆ ಮಧ್ಯದಲ್ಲಿ, ಹಿರಣ್ಯಕೇನ = ಹಿರಣ್ಯಕನಿಂದ, ಆಗತ್ಯ = ಬಂದು, ಮಂಥರಸ್ಯ = ಆಮೆಯ, ಬಂಧನಂ = ಕಟ್ಟು, ಛಿನ್ನಂ = ಕತ್ತರಿಸಲ್ಪಟ್ಟಿತು. ಸ ಕೂರ್ಮಃ = ಆ ಆಮೆಯು, ಸತ್ವರಂ = ಬೇಗನೆ, ಲಾಶಯಂ = ಕೊಳವನ್ನು, ಪ್ರವಿವೇಶ = ಹೊಕ್ಕಿತು. ಸಃ ಮೃಗಃ = ಆ

प्रत्यावृत्य लुब्धको यावत्तरुतलमायाति तावत्कूर्ममपश्यन्नचिन्तयत्—'उचित-मेवैतन्ममासमीक्ष्यकारिणः । यतः ।

೧೮. यो ध्रुवाणि परित्यज्य अध्रुवाणि निषेवते।
ध्रुवाणि तस्य नश्यन्ति अध्रुवं नष्टमेव हि ॥ २११ ॥

೧೯. ततोऽसौ स्वकर्मवशान्निराशः कटकं प्रविष्टः । मन्थरादयः सर्व

---

ಜಿಂಕೆಯು, ಆಸನ್ನಂ= ಸಮೀಪಿಸಿದ, ತಂ ವ್ಯಾಧಂ = ಆ ಬೇಡನನ್ನು, ವಿಲೋಕ್ಯ=ನೋಡಿ, ಉತ್ಥಾಯ = ಎದ್ದು, ಪಲಾಯಿತಃ = ಓಡಿತು. ಲುಬ್ಧಕಃ=ಬೇಡನು, ಪ್ರತ್ಯಾವೃತ್ಯ=ಹಿಂದಿರುಗಿ, ಯಾವತ್=ಎಷ್ಟರಲ್ಲಿ, ತರುತಲಂ=ಮರದಬುಡಕ್ಕೆ, ಆಯಾತಿ = ಬರುತ್ತಾನೊ; ತಾವತ್ = ಅಷ್ಟರಲ್ಲಿ, ಕೂರ್ಮಂ = ಆಮೆಯನ್ನು, ಅಪಶ್ಯನ್=ನೋಡದೆ ಇದ್ದವನಾಗಿ, ಅಚಿಂತಯತ್ = ಆಲೋಚಿಸಿದನು. ಅಸಮೀಕ್ಷ್ಯಕಾರಿಣಃ = ಆಲೋಚಿಸದೆ ಕೆಲಸ ಮಾಡುವ, ಮಮ = ನನಗೆ, ಏತತ್ = ಇದು, ಉಚಿತಂ=ಯೋಗ್ಯವಾದುದು.

೧೮. ಅ॥ ಯಃ=ಯಾವನು, ಧ್ರುವಾಣಿ = ಸ್ಥಿರವಾದುವುಗಳನ್ನು, ಪರಿತ್ಯಜ್ಯ=ಬಿಟ್ಟು, ಅಧ್ರುವಾಣಿ=ಅಸ್ಥಿರವಾದುವುಗಳನ್ನು, ನಿಷೇವತೇ =ಸೇವಿಸುತ್ತಾನೊ. ತಸ್ಯ=ಅವನ, ಧ್ರುವಾಣಿ = ಸ್ಥಿರವಾದುವುಗಳು, ನಶ್ಯಂತಿ=ನಾಶವಾಗುತ್ತವೆ. ಅಧ್ರುವಂ=ಅಸ್ಥಿರವಾದುದು, ನಷ್ಟಂ ಏವ ಹಿ=ನಷ್ಟವಾದುದೇ.

ತಾ॥ ತನ್ನಲ್ಲಿ ನೆಲೆಯಾಗಿ ನಿಂತಿರುವ ವಸ್ತುವನ್ನು ಪರಿತ್ಯಜಿಸಿ ಅಸ್ಥಿರವಾದ ಇನ್ನೊಂದು ವಸ್ತುವನ್ನು ಪಡೆಯಲು ಯತ್ನಿಸಿದರೆ ಅವನಲ್ಲಿ ಸ್ಥಿರವಾಗಿರುವುದು ನಷ್ಟವಾಗುವುದು. ಅಸ್ಥಿರವಾದುದು ಮೊದಲೇ ನಷ್ಟವಾಗಿದೆಯಷ್ಟೆ, ಹೀಗೆ ಅವನಿಗೆ ಎರಡೂ ಇಲ್ಲ.

೧೯. ಅ॥ ತತಃ=ಬಳಿಕ, ಅಸೌ=ಈ ಬೇಡನು, ಸ್ವಕರ್ಮವಶಾತ್= ತನ್ನ ಕೆಲಸದಿಂದ, ನಿರಾಶಃ=ಆಶೆಯಿಲ್ಲದವನಾಗಿ, ಕಟಕಂ=ಶಿಬಿರವನ್ನು,

त्यक्तापदः स्वस्थानं गत्वा यथासुखमास्थिताः । अथ राजपुत्रैः सानन्द-मुक्तम्—'सर्वं श्रुतवन्तः सुखिनो वयम् । सिद्धं नः समीहितम् ।' विष्णु-शर्मोवाच—'एतावता भवतामभिलषितं सम्पन्नम् । अपरमिदमस्तु—

೨೦. **मित्रं प्राप्नुत सज्जना जनपदैर्लक्ष्मीः समालम्ब्यतां**
**भूपालाः परिपालयन्तु वसुधां शश्वत् स्वधर्मे स्थिताः ।**

---

ಪ್ರವಿಷ್ಟಃ=ಹೊಕ್ಕನು. ಮಂಥರಾದಯಃ ಸರ್ವೇ=ಮಂಥರ ಮೊದಲಾದವೆಲ್ಲ, ತ್ಯಕ್ತಾಪದಃ=ಬಿಡಲ್ಪಟ್ಟ ಕಷ್ಟವುಳ್ಳವುಗಳಾಗಿ, ಸ್ವಸ್ಥಾನಂ ಗತ್ವಾ=ತಮ್ಮ ಸ್ಥಳಕ್ಕೆ ಹೋಗಿ, ಯಥಾಸುಖಂ=ಸೌಖ್ಯವಾಗಿ,ಆಸ್ಥಿತಾಃ=ಇದ್ದುವು.

ಅಥ=ಬಳಿಕ, ರಾಜಪುತ್ರೈಃ=ರಾಜಕುಮಾರರಿಂದ, ಸಾನಂದಂ=ಸಂತೋಷದಿಂದ ಸಹಿತವಾಗಿ, ಉಕ್ತಂ=ಹೇಳಲ್ಪಟ್ಟಿತು. ಸರ್ವಂ=ಎಲ್ಲವನ್ನೂ, ಶ್ರುತವಂತಃ=ಕೇಳಿದ, ವಯಂ=ನಾವು, ಸುಖಿನಃ=ಸೌಖ್ಯವುಳ್ಳವರು. ನಃ=ನಮ್ಮ, ಸಮೀಹಿತಂ=ಇಷ್ಟವು, ಸಿದ್ಧಂ=ಕೈಗೂಡಿತು.' ವಿಷ್ಣುಶರ್ಮಾ ಉವಾಚ=ವಿಷ್ಣುಶರ್ಮನು ಹೇಳುತ್ತಾನೆ. 'ಏತಾವತಾ=ಇಷ್ಟರಿಂದ, ಭವತಾಂ=ನಿಮ್ಮ, ಅಭಿಲಷಿತಂ=ಇಷ್ಟಾರ್ಥವು, ಸಂಪನ್ನಂ=ಕೈಗೂಡಿತು. ಇದಂ ಅಪರಂ ಅಸ್ತು=ಬೇರೆ ಇದೂ ಆಗಲಿ.

೨೦. ಅ॥ ಸಜ್ಜನಾಃ=ಸಜ್ಜನರೆ! ಮಿತ್ರಂ=ಸ್ನೇಹಿತನನ್ನು, ಪ್ರಾಪ್ನುತ=ಹೊಂದಿರಿ. ಜನಪದೈಃ=ದೇಶಗಳಿಂದ, ಲಕ್ಷ್ಮೀಃ=ಸಂಪತ್ತು, ಸಮಾಲಂಬ್ಯತಾಂ=ಆಶ್ರಯಿಸಲ್ಪಡಲಿ. ಭೂಪಾಲಾಃ=ದೊರೆಗಳು, ಶಶ್ವತ್=ಯಾವಾಗಲೂ, ಸ್ವಧರ್ಮೇ=ತಮ್ಮ ಧರ್ಮದಲ್ಲಿ, ಸ್ಥಿತಾಃ=ಇದ್ದವರಾಗಿ, ವಸುಧಾಂ=ಭೂಮಿಯನ್ನು, ಪರಿಪಾಲಯಂತು=ಕಾಪಾಡಲಿ. ನೀತಿಃ=ನೀತಿಯು, ನವೋಢೇವ = ಹೊಸದಾಗಿ ಮದುವೆಯಾದ ಹೆಣ್ಣಿನಂತೆ, ಸುಕೃತಿನಾಂ=ಪುಣ್ಯವಂತರಾದ, ವಃ=ನಿಮ್ಮ, ಮಾನಸತುಷ್ಟಯೇ=ಮನಸ್ಸಿನ ಸಂತೋಷಕ್ಕಾಗಿ, ಆಸ್ತಾಂ=ಇರಲಿ. ಭಗವಾನ್=ಪೂಜ್ಯನಾದ,

आस्तां मानसतुष्टये सुकृतिनां नीतिर्नवोढेव वः
कल्याणं कुरुतां जनस्य भगवांश्चद्रार्धचूडामणिः ॥

इति हितोपदेशे मित्रलाभो नाम प्रथमः कथासङ्ग्रहः समाप्तः

---

ಚಂದ್ರಾರ್ಧಚೂಡಾಮಣಿಃ = ಚಂದ್ರಮೌಳೀಶ್ವರನು, ಜನಸ್ಯ = ಭಕ್ತಜನರಿಗೆ, ಕಲ್ಯಾಣಂ = ಮಂಗಳವನ್ನು, ಕುರುತಾಂ = ಉಂಟುಮಾಡಲಿ.

ತಾ॥ ಸಜ್ಜನರೆ, ಸ್ನೇಹಿತರನ್ನು ಪಡೆಯಿರಿ. ದೇಶವು ಸಂಪದ್ಭರಿತವಾಗಲಿ. ದೊರೆಗಳು ಯಾವಾಗಲೂ ತಮ್ಮ ಧರ್ಮದಲ್ಲಿ ಆಸಕ್ತರಾಗಿ ಧರೆಯನ್ನು ಕಾಪಾಡಲಿ. ಹೊಸದಾಗಿ ಮದುವೆಯಾದ ಹೆಣ್ಣು ಪತಿಗೆ ಸಂತೋಷವನ್ನುಂಟು ಮಾಡುವಂತೆ ನೀತಿಯು ಪುಣ್ಯಶಾಲಿಗಳಾದ ನಿಮ್ಮ ಮನಸ್ಸಿಗೆ ಸಂತೋಷವನ್ನುಂಟು ಮಾಡಲಿ. ಪೂಜ್ಯನಾದ ಚಂದ್ರಮೌಳೀಶ್ವರನು ಜನರಿಗೆ ಮಂಗಳವನ್ನುಂಟು ಮಾಡಲಿ.

## ಮಿತ್ರಲಾಭದ-ಕಥಾಸಾರಾಂಶ

ಪಾಟಲಿಪುತ್ರದ ದೊರೆ ಸುದರ್ಶನನ ಪ್ರಾರ್ಥನೆಯಂತೆ ವಿಷ್ಣುಶರ್ಮ ನೆಂಬ ಮಹಾಪಂಡಿತನು ಅರಮನೆಯಲ್ಲಿ ಸುಖವಾಗಿ ಕೂತಿರುವ ರಾಜಕುಮಾರ ನನ್ನು ಕುರಿತು ಇಂತೆಂದನು. 'ನಾನು ನಿಮ್ಮ ವಿನೋದಕ್ಕಾಗಿ ಕಾಗೆ, ಆಮೆ ಮೊದಲಾದುವುಗಳ ಆಶ್ಚರ್ಯಕರವಾದ ಕಥೆಗಳನ್ನು ಹೇಳುತ್ತೇನೆ. ಕೇಳಿರಿ' ಎಂದು ಈ ರೀತಿ ಹೇಳಲಾರಂಭಿಸಿದನು.

ಗೋದಾವರೀನದಿಯ ದಡದಲ್ಲಿ ದೊಡ್ಡ ಬೂರುಗದ ಮರವಿದ್ದಿತು. ಅದ ರಲ್ಲಿ ನಾನಾ ದೇಶದ ಪಕ್ಷಿಗಳು ರಾತ್ರಿಯಲ್ಲಿ ವಾಸಮಾಡುತ್ತಿದ್ದುವು. ಒಂದು ದಿನ ಬೆಳಗ್ಗೆ ಲಘುಪತನಕವೆಂಬ ಕಾಗೆಯು ಒಬ್ಬ ಬೇಡನು ಅಕ್ಕಿಕಾಳುಗಳನ್ನು ಚೆಲ್ಲಿ ಬಲೆಯನ್ನು ಹರವಿದ್ದನ್ನು ಕಂಡಿತು. ಅದೇ ಸಮಯದಲ್ಲಿ ಚಿತ್ರಗ್ರೀವ ನೆಂಬ ಪಾರಿವಾಳದ ರಾಜನು ಆಕಾಶದಲ್ಲಿ ಹಾರುತ್ತ ಆ ಅಕ್ಕಿಕಾಳುಗಳನ್ನು ನೋಡಿತು ಬಳಿಕ ಅದು ಅಕ್ಕಿಕಾಳುಗಳಲ್ಲಿ ಆಶೆಗೊಂಡು ಪಾರಿವಾಳಗಳನ್ನು ಕುರಿತು 'ಈ ಜನರಿಲ್ಲದ ಕಾಡಿನಲ್ಲಿ ಅಕ್ಕಿಕಾಳುಗಳು ಇರುವುದು ಹೇಗೆ ? ಆದ್ದ ರಿಂದ ನೋಡಿ. ಇದರಿಂದ ಒಳ್ಳೆಯದಾಗುವುದೆಂದು ನಾನರಿಯೆನು. ಇದರ ಆಶೆ ಯಿಂದ ನಾವೂ ದಾರಿಹೋಕನಂತಾಗಬೇಕಾದೀತು.' ಪಾರಿವಾಳಗಳು ಅದು ಹೇಗೆಂದು ಕೇಳಿದುವು. ಚಿತ್ರಗ್ರೀವನು ಹೇಳುತ್ತಾನೆ.

### ಒಂದನೆ ಕಥೆ

'ನಾನು ದಕ್ಷಿಣಾರಣ್ಯದಲ್ಲಿ ಸಂಚರಿಸುತ್ತ ಕೆರೆಯ ದಡದಲ್ಲಿ ಒಂದು ಮುದಿ ಹುಲಿಯನ್ನು ಕಂಡೆನು. ಅದು ಕೈಯಲ್ಲಿ ದರ್ಭೆಯನ್ನು ಹಿಡಿದುಕೊಂಡು ನನ್ನಲ್ಲೊಂದು ಚಿನ್ನದ ಬಳೆಯಿದೆ ತೆಗೆದುಕೊಳ್ಳಿ ಎನ್ನುತ್ತಿತ್ತು. ದಾರಿಹೋಕ ನೊಬ್ಬನು ಅದನ್ನು ನೋಡಿ ಆಶೆಗೊಂಡು ಚಿನ್ನದ ಬಳೆ ಎಲ್ಲಿ ತೋರಿಸು ಎಂದನು. ಹುಲಿಯು ತೋರಿಸಿತು ಪಾಂಥನು ಸಂಶಯಗೊಂಡು 'ಘಾತುಕ ನಾದ ನಿನ್ನನ್ನು ಹೇಗೆ ನಂಬಲಿ' ಎಂದನು. ಹುಲಿಯು ದಾರಿಹೋಕನೆ 'ನಾನು ಯೌವನದಲ್ಲಿ ದುರ್ನಡತೆಯುಳ್ಳವನಾಗಿ ಅನೇಕ ಹಸು ಮತ್ತು ಮನುಷ್ಯ ರನ್ನು ಕೊಂದುದರಿಂದ ನನ್ನ ಹೆಂಡತಿ ಮಕ್ಕಳು ಸತ್ತರು. ಈಗ ಸಂತತಿ ಯಿಲ್ಲದ ನಾನು ಒಬ್ಬ ಧಾರ್ಮಿಕನ ಬುದ್ಧಿವಾದದಂತೆ ದಾನಶೀಲನಾಗಿರು

ವೆನು ಉದುರಿದ ಉಗುರುಹಲ್ಲುಗಳುಳ್ಳ ಮುದುಕನಾಗಿದ್ದೇನೆ. ಈ ಚಿನ್ನದ ಬಳೆಯನ್ನು ಯಾರಿಗಾದರೂ ದಾನಮಾಡಲು ಆಲೋಚಿಸಿದ್ದೇನೆ. ಆದ್ದರಿಂದ ಯೋಗ್ಯಪಾತ್ರನಾದ ನೀನು ಈ ಕೊಳದಲ್ಲಿ ಮಿಂದು ಇದನ್ನು ತೆಗೆದುಕೊ' ಎಂದಿತು. ಪಾಂಥನು ಬಳೆಯ ಆಶೆಯಿಂದ ಸ್ನಾನಮಾಡಲು ಕೊಳಕ್ಕಿಳಿದು ಕೆಸರಿನಲ್ಲಿ ಮುಳುಗಿ, ಓಡಲು ಅಶಕ್ತನಾದನು. ಆಗ ಹುಲಿಯು ಮುಳುಗಿ ಹೋದೆಯಾ ! ನಿನ್ನನ್ನು ಮೇಲಕ್ಕೆತ್ತುವೆನು' ಎಂದು ಅವನನ್ನು ಹಿಡಿದು ಕೊಂದು ತಿಂದಿತು. ಆದ್ದರಿಂದ ಆಲೋಚಿಸದೆ ಯಾವ ಕೆಲಸವನ್ನೂ ಮಾಡಬಾರದು.

ಈ ಮಾತನ್ನು ಕೇಳಿ ಒಂದು ಪಾರಿವಾಳವು ಅಹಂಕಾರದಿಂದ 'ಎಲ್ಲದರಲ್ಲಿಯೂ ಸಂದೇಹಗೊಂಡರೆ ಜೀವಿಸುವುದು ಹೇಗೆ? ಎಂದಿತು. ಅದರ ಮಾತನ್ನು ಕೇಳಿ ಎಲ್ಲ ಪಾರಿವಾಳಗಳು ಬಲೆಯ ಮೇಲೆ ಕುಳಿತು ಅದರಿಂದ ಕಟ್ಟಲ್ಪಟ್ಟವು. ಆಗ ಚಿತ್ರಗ್ರೀವನು ಹೀಗೆಂದಿತು. 'ಈಗ ನಮಗೆ ಆಪತ್ತು ಒದಗಿದೆ. ಆದ್ದರಿಂದ ಧೈರ್ಯವನ್ನು ತಾಳಿ ಇದಕ್ಕೆ ಪ್ರತೀಕಾರವನ್ನು ಆಲೋಚಿಸೋಣ. ಎಲ್ಲರೂ ಒಮ್ಮತದಿಂದ ಬಲೆಯನ್ನು ಎತ್ತಿಕೊಂಡು ಹಾರೋಣ.' ಅದರಂತೆ ಅವು ಬಲೆಯನ್ನು ಎತ್ತಿಕೊಂಡು ಗಂಡಕೀ ತೀರದಲ್ಲಿರುವ ಚಿತ್ರವನದಲ್ಲಿ ವಾಸಿಸುವ ಮಿತ್ರ ಹಿರಣ್ಯಕನ ಹತ್ತಿರಕ್ಕೆ ಹೋದುವು. ಆ ಹಿರಣ್ಯಕನು ಚಿತ್ರಗ್ರೀವ ಮೊದಲಾದವರ ಬಂಧನವನ್ನು ಕತ್ತರಿಸಿ ಆತಿಥ್ಯವನ್ನು ಮಾಡಿತು. ಪಾರಿವಾಳಗಳು ತಮಗಿಷ್ಟವಾದ ದೇಶಕ್ಕೆ ತೆರಳಿದುವು. ಇದನ್ನು ನೋಡಿದ ಲಘುಪತನಕವೆಂಬ ಕಾಗೆಯು ಹಿರಣ್ಯಕನ ಸ್ನೇಹವನ್ನು ಬಯಸಿತು. ಆಗ ಹಿರಣ್ಯಕನು 'ನೀನು ನನ್ನನ್ನು ತಿನ್ನುವವನು, ನಾನು ತಿನ್ನಿಸಿಕೊಳ್ಳುವವನು. ನಮ್ಮಿರ್ವರ ಮೈತ್ರಿಯು ಆಪತ್ತಿಗೆ ಕಾರಣವಾಗುವುದು' ಎಂದಿತು. 'ಇದು ಹೇಗೆ' ಎಂದು ಕಾಗೆಯು ಕೇಳಿತು. ಹಿರಣ್ಯಕನು ಈ ರೀತಿ ಹೇಳಲಾರಂಭಿಸಿತು.

## ಎರಡನೆ ಕಥೆ

ಮಗಧ ದೇಶದಲ್ಲಿ ಚಂಪಕವತಿಯೆಂಬ ದೊಡ್ಡ ಕಾಡಿದೆ. ಅಲ್ಲಿ ಬಹಳ ಕಾಲದಿಂದ ಒಂದು ಜಿಂಕೆ ಮತ್ತು ಕಾಗೆಗಳು ಅತಿ ಸ್ನೇಹದಿಂದ ವಾಸಮಾಡುತ್ತಿದ್ದುವು. ಜಿಂಕೆಯು ಕಾಡಿನಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿರಲು ಅದನ್ನು

ಒಂದು ನರಿಯು ನೋಡಿ ಅದರ ಮಾಂಸವನ್ನು ತಿನ್ನಲು ಬಯಸಿ ಸಮೀಪಕ್ಕೆ ಬಂದು 'ಸ್ನೇಹಿತನೆ ಕ್ಷೇಮವೆ? ಎಂದು ಕೇಳಿತು. ಜಿಂಕೆಯು 'ನೀನಾರು' ಎಂದು ಪ್ರಶ್ನಿಸಿತು. ನರಿಯು 'ನಾನು ಕ್ಷುದ್ರಬುದ್ಧಿಯೆಂಬ ನರಿ. ಈ ಕಾಡಿನಲ್ಲಿ ಬಂಧುಗಳಿಲ್ಲದೆ ಸತ್ತವನಂತೆ ವಾಸ ಮಾಡುತ್ತಿದ್ದೇನೆ. ಈಗ ಸ್ನೇಹಿತನಾದ ನಿನ್ನನ್ನು ಪಡೆದು ಮರಳಿ ಪ್ರಪಂಚಕ್ಕೆ ಬಂದಿದ್ದೇನೆ. ಇನ್ನು ಮುಂದೆ ನಾನು ನಿನ್ನೊಡನೆ ಯಾವಾಗಲೂ ಇರುವೆನು' ಎಂದಿತು. ಜಿಂಕೆಯು ಅದನ್ನು ಒಪ್ಪಿತು.

ಬಳಿಕ ಸಾಯಂಕಾಲ ಆ ಜಿಂಕೆನರಿಗಳು ಜಿಂಕೆಯ ವಾಸಸ್ಥಳಕ್ಕೆ ಹೋಗುತ್ತಿರಲು ಅಲ್ಲಿ ಸಂಪಿಗೆಯ ಮರದಲ್ಲಿ ಕುಳಿತಿರುವ ಜಿಂಕೆಯ ಬಹು ಕಾಲದ ಮಿತ್ರನಾದ ಸುಬುದ್ಧಿಯೆಂಬ ಕಾಗೆಯು ಅವುಗಳನ್ನು ನೋಡಿ ಹೀಗೆ ಕೇಳಿತು. 'ಮಿತ್ರ ಚಿತ್ರಾಂಗದ ಈ ಇನ್ನೊಬ್ಬನಾರು ? ಜಿಂಕೆಯು ಇವನು 'ನನ್ನೊಡನೆ ಸ್ನೇಹದಿಂದಿರಲು ಬಯಸಿದ ನರಿಯು' ಎಂದಿತು. ಕಾಗೆಯು ಹೊಸಬನೊಡನೆ ಸ್ನೇಹ ಬೆಳಸಕೂಡದು. ಜರದ್ಗವವೆಂಬ ಹದ್ದು ಬೆಕ್ಕಿನೊಡನೆ ಹಾಗೆ ಸ್ನೇಹಮಾಡಿ ಸತ್ತಿತು. ಅದು ಹೇಗೆಂದರೆ:—

## ಮೂರನೆ ಕಥೆ

ಗಂಗೆಯ ತಡಿಯಲ್ಲಿರುವ ಗೃಧ್ರಕೂಟವೆಂಬ ಬೆಟ್ಟದಲ್ಲಿ ದೊಡ್ಡ ಪಣಿ–ಯಾಲ ಮರವಿದೆ. ಅದರ ಪೊಟರೆಯಲ್ಲಿ ಒಂದು ಮುದಿ ಕುರುಡು ಜರದ್ಗವವೆಂಬ ಹದ್ದು ವಾಸಿಸುತ್ತಿತ್ತು. ಅದರ ಜೀವನಕ್ಕಾಗಿ ಆ ಮರದಲ್ಲಿ ವಾಸಿಸುವ ಪಕ್ಷಿಗಳು ದಯೆಯಿಂದ ತಮ್ಮ ಆಹಾರದಿಂದ ಸ್ವಲ್ಪಸ್ವಲ್ಪವನ್ನು ಕೊಡುತಿದ್ದುವು. ಆದರಿಂದ ಅದು ಜೀವಿಸುತ್ತಿದ್ದಿತು.

ಒಂದಾನೊಂದು ದಿನ ದೀರ್ಘಕರ್ಣನೆಂಬ ಒಂದು ಬೆಕ್ಕು ಅಲ್ಲಿರುವ ಪಕ್ಷಿಗಳ ಮರಿಗಳನ್ನು ತಿನ್ನಲು ಅಲ್ಲಿಗೆ ಬಂದಿತು. ಅದನ್ನು ನೋಡಿ ಹಕ್ಕಿಮರಿಗಳು ಹೆದರಿ ಗದ್ದಲ ಮಾಡಿದುವು. ಜರದ್ಗವನು ಅದನ್ನು ಕೇಳಿ 'ಬರುತ್ತಿರುವುದು ಯಾರು ? ಎಂದು ಕೇಳಿತು. ಬೆಕ್ಕು ಹದ್ದನ್ನು ನೋಡಿ ಹೆದರಿ ಈಗ ಇದರ ಹತ್ತಿರದಿಂದ ಓಡಿಹೋಗುವುದು ಕಷ್ಟ. ಆದ್ದರಿಂದ ಆದದ್ದಾಗಲಿ. ಇದಕ್ಕೆ ನಂಬಿಕೆಯನ್ನು ಹುಟ್ಟಿಸಿ ಹತ್ತಿರ ಹೋಗುವೆನು ಎಂದಾಲೋಚಿಸಿ ಸಮೀಪಿಸಿ 'ನಾನು ಬೆಕ್ಕು. ಗಂಗೆಯಲ್ಲಿ ನಿತ್ಯವೂ ಮಿಂದು ಬ್ರಹ್ಮಚರ್ಯವನ್ನು ಪಾಲಿಸುತ್ತ

ಚಾಂದ್ರಾಯಣ ವ್ರತವನ್ನಾಚರಿಸುತ್ತಿರುವೆನು. ನೀವು ಧರ್ಮಜ್ಞರೆಂಬು ದನ್ನರಿತು ವಿದ್ಯಾವೃದ್ಧರೂ, ವಯೋವೃದ್ಧರೂ ಆದ ನಿಮ್ಮಿಂದ ಧರ್ಮ ವನ್ನರಿಯಲು ಬಂದಿದ್ದೇನೆ' ಎಂದಿತು. ಹದ್ದು 'ಬೆಕ್ಕು ಮಾಂಸವನ್ನು ಅಪೇಕ್ಷಿಸತಕ್ಕುದು. ಇಲ್ಲಿ ಹಕ್ಕಿಮರಿಗಳು ವಾಸಮಾಡಿಕೊಂಡಿವೆ. ಆದ್ದ ರಿಂದ ನೀನು ಇಲ್ಲಿಂದ ಹೊರಡು' ಎಂದಿತು. ಅದನ್ನು ಕೇಳಿ ಬೆಕ್ಕು 'ನಾನು ಧರ್ಮಶಾಸ್ತ್ರವನ್ನು ಕೇಳಿ ವೈರಾಗ್ಯಗೊಂಡು ಚಾಂದ್ರಾಯಣ ವ್ರತವನ್ನಾ ಚರಿಸುತ್ತಿದ್ದೇನೆ. ಅಹಿಂಸೆಯೇ ಮುಖ್ಯಧರ್ಮವೆಂಬುದನ್ನು ತಿಳಿದಿದ್ದೇನೆ. ಈ ಸುಟ್ಟಹೊಟ್ಟೆಗಾಗಿ ಯಾರು ಪಾಪವನ್ನು ಮಾಡಿಯಾರು.' ಎಂದು ಹದ್ದಿಗೆ ನಂಬಿಕೆಯನ್ನು ಹುಟ್ಟಿಸಿ ಆ ಮರದ ಪೊಟರೆಯಲ್ಲಿಯೇ ವಾಸಿಸುತ್ತಿದ್ದಿತು.

ಹೀಗೆ ಕೆಲವು ದಿವಸಗಳು ಕಳೆಯಲು ಬೆಕ್ಕು ಹಕ್ಕಿಮರಿಗಳನ್ನು ತನ್ನ ಪೊಟರೆಗೆ ತಂದು ತಿನ್ನುತ್ತಿದ್ದಿತು ಪಕ್ಷಿಗಳು ಇದನ್ನರಿತು ಯಾರು ತಿನ್ನು ತ್ತಿರುವವರು ಎಂದು ವಿಚಾರ ಮಾಡುತ್ತಿರಲು ಬೆಕ್ಕು ಅಲ್ಲಿಂದ ಹೊರಟು ಹೋಯಿತು. ಹಕ್ಕಿಗಳು ಅಲ್ಲಿ ಇಲ್ಲಿ ಹುಡುಕುತ್ತ ಪೊಟರೆಯಲ್ಲಿ ಮರಿಗಳ ಎಲುಬಿರುವುದನ್ನು ಕಂಡು ಈ ಹದ್ದೇ ನಮ್ಮ ಮರಿಗಳನ್ನು ತಿಂದಿರುವುದೆಂದು ನಿಶ್ಚಯಿಸಿ ಅದನ್ನು ಕೊಂದುವು. ಆದ್ದರಿಂದ ಪರಿಚಯವಿಲ್ಲದವರಿಗೆ ಆಶ್ರಯ ವನ್ನು ಕೊಡಬಾರದು.

ಇದನ್ನು ನರಿಯು ಕೇಳಿ ಸಿಟ್ಟಿನಿಂದ 'ಮೃಗವನ್ನು ಮೊದಲನೆ ದಿನ ನೋಡಿ ದಾಗ ನೀನೂ ಪರಿಚಯವಿಲ್ಲದವನೇ. ಹಾಗಾದರೆ ಹೇಗೆ ನಿಮ್ಮಿಬ್ಬರಿಗೆ ಸ್ನೇಹವು ವೃದ್ಧಿಯಾಗುತ್ತಾ ಬಂದಿತು? ಹೇಗೆ ಈ ಮೃಗವು ನನಗೆ ಬಂಧುವೊ ನೀನೂ ಬಂಧುವೇ.' ಇದನ್ನು ಕೇಳಿ ಜಿಂಕೆಯು 'ಈ ವಾಗ್ವಾದದಿಂದೇನು ಪ್ರಯೋಜನ? ಎಲ್ಲರೂ ಒಟ್ಟಿಗೆ ಒಂದೆಡೆ ಸುಖವಾಗಿರೋಣ' ಎಂದಿತು. ಬಳಿಕ ಬೆಳಿಗ್ಗೆ ಅವೆಲ್ಲವೂ ತಮ್ಮಿಷ್ಟಬಂದ ಪ್ರದೇಶಕ್ಕೆ ತೆರಳಿದುವು.

ಒಂದಾನೊಂದು ದಿನ ನರಿಯು ವಿನಯದಿಂದ ಜಿಂಕೆಯನ್ನು ಕುರಿತು ಈ ಕಾಡಿನ ಒಂದು ಕಡೆ ಪೈರುಗಳ ಹೊಲವಿದೆ ಅಲ್ಲಿಗೆ ನಿನ್ನನ್ನು ಒಯ್ದು ತೋರಿಸುತ್ತೇನೆ ಎಂದು ಕರೆದುಕೊಂಡು ಹೋಗಿ ತೋರಿಸಿತು. ಅಂದಿನಿಂದ ಜಿಂಕೆಯು ಪ್ರತಿದಿನವೂ ಹೊಲಕ್ಕೆ ಹೋಗಿ ಪೈರುಗಳನ್ನು ಮೇಯುತ್ತಿರಲು

ಕ್ಷೇತ್ರಪಾಲಕನು ಅದನ್ನು ಹಿಡಿಯಲು ಬಲೆಯನ್ನು ಹರವಿದನು. ಅದರಲ್ಲಿ ಜಿಂಕೆಯು ಸಿಕ್ಕಿಕೊಂಡು ಸೇಚಾಡುತ್ತ ಅಲ್ಲಿಗೆ ಬಂದ ನರಿಗೆ ಬಿಡಿಸೆಂದಿತು. ಅದು 'ಈ ದಿನ ಭಾನುವಾರವಾದ್ದರಿಂದ ನಾಡಿಯಿಂದಾದ ಈ ಹಗ್ಗವನ್ನು ಮುಟ್ಟ ಲಾರೆ, ನಾಳೆ ಬಿಡಿಸುತ್ತೇನೆ' ಎಂದಿತು. ಅಷ್ಟರಲ್ಲಿ ಸಾಯಂಕಾಲವಾದ್ದರಿಂದ ಕಾಗೆಯು ಮೃಗವನ್ನು ಕಾಣದೆ ಹುಡುಕುತ್ತ ಹಗ್ಗದಿಂದ ಕಟ್ಟಿದ ಆ ಮೃಗ ವನ್ನು ಕಂಡು ವ್ಯಥೆಗೊಂಡು ನರಿಯನ್ನು ನಿಂದಿಸಿತು. ಬೆಳಗ್ಗೆ ಹೊಲದ ಒಡೆಯನು ದೊಣ್ಣೆಯನ್ನು ತೆಗೆದುಕೊಂಡು ಬರಲು ಕಾಗೆಯು ಮೃಗಕ್ಕೆ 'ಸತ್ತಂತೆ ನಟಿಸು. ನಾನು ಕೂಗಿದಾಗ ಓಡು' ಎಂದಿತು. ಜಿಂಕೆಯು ಹಾಗಿರಲು ಜಿಂಕೆಯು ಸತ್ತಿದೆ ಎಂದು ತಿಳಿದು ಕ್ಷೇತ್ರಪತಿಯು ಮೃಗದ ಕಟ್ಟನ್ನು ಬಿಡಿಸಲು ಜಿಂಕೆಯು ಓಡಿ ಹೋಯಿತು. ಆಗ ಹೊಲದ ಒಡೆಯನು ದೊಣ್ಣೆಯನ್ನು ಬಿಸಾಡಲು ಅಲ್ಲಿ ಮೃಗದ ಮಾಂಸದ ಆಶೆಯಿಂದ ಇದ್ದ ನರಿಯು ಸತ್ತಿತು. ಆದ್ದರಿಂದ ಭಕ್ಷ್ಯಭಕ್ಷಕರ ಪ್ರೀತಿಯು ಆಪತ್ತಿಗೆ ಕಾರಣವಾಗುವುದು' ಎಂದಿತು. ಕಾಗೆಯು ತಿರುಗಿ 'ನಾನೆಲ್ಲವನ್ನೂ ಕೇಳಿರುತ್ತೇನೆ. ನಾನು ನಿನ್ನೊಡನೆ ಸ್ನೇಹ ದಿಂದಿರಲು ಬಯಸುತ್ತೇನೆ ಹಾಗಿರಲು ನೀನು ಒಪ್ಪದಿದ್ದರೆ ನಾನು ಉಪವಾಸ ದಿಂದ ಸಾಯುತ್ತೇನೆ' ಎಂದಿತು. ಇದರಿಂದ ಹಿರಣ್ಯಕನು ನಂಬಿ ಅದರೊಡನೆ ಸ್ನೇಹದಿಂದ ಇದ್ದಿತು.

ಒಂದಾನೊಂದು ದಿನ ಲಘುಪತನಕನು ಹಿರಣ್ಯಕನನ್ನು ಕುರಿತು 'ಈ ಸ್ಥಳ ದಲ್ಲಿ ಆಹಾರವು ಸುಲಭವಾಗಿ ಸಿಕ್ಕುವುದಿಲ್ಲ. ಆದ್ದರಿಂದ ನಾನು ಬೇರೆ ಸ್ಥಳಕ್ಕೆ ಹೋಗಲು ಇಚ್ಛಿಸುತ್ತೇನೆ' ಎಂದಿತು. ಹಿರಣ್ಯಕನು 'ನೀನು ಹೋಗುವ ಕಡೆ ನನ್ನನ್ನೂ ಕರೆದುಕೊಂಡು ಹೋಗು' ಎಂದು ಹೇಳಿತು. ಅದಕ್ಕೆ ಒಪ್ಪಿ ಕಾಗೆಯು ಹಿರಣ್ಯಕನೊಡನೆ ಮಂಥರನೆಂಬ ಆಮೆಯ ಬಳಿಗೆ ಹೋಗಿ ಅದರೊಡನೆ ಸ್ನೇಹ ಮಾಡಿಸಿತು. ಆಮೆಯು ಹಿರಣ್ಯಕನನ್ನು ನಿರ್ಜನ ವನಕ್ಕೆ ಬರಲು ಕಾರಣ ವನ್ನು ಕೇಳಿತು. ಹಿರಣ್ಯಕನು ಹೀಗೆ ಹೇಳಿತು.

## ನಾಲ್ಕನೆ ಕಥೆ

'ಚಂಪಕವೆಂಬ ನಗರದಲ್ಲಿ ಚೂಡಾಕರ್ಣನೆಂಬ ಸನ್ಯಾಸಿಯು ವಾಸವಾಗಿ ದ್ದನು. ಅವನು ಊಟ ಮಾಡಿ ಉಳಿದ ಅನ್ನವನ್ನು ಭಿಕ್ಷಾಪಾತ್ರೆಯಲ್ಲಿರಿಸಿ

ಒಂದು ಗೂಟದಲ್ಲಿ ತೂಗು ಹಾಕುತ್ತಿದ್ದನು ನಾನು ಪ್ರತಿದಿನವೂ ಮೇಲಕ್ಕೆ ಹಾರಿ ಆ ಅನ್ನವನ್ನು ತಿನ್ನುತ್ತಿದ್ದೆನು. ಬಳಿಕ ಒಂದು ದಿನ ಅವನ ಸ್ನೇಹಿತ ನಾದ ವೀಣಾಕರ್ಣನೆಂಬ ಸನ್ಯಾಸಿಯು ಅಲ್ಲಿಗೆ ಬಂದನು. ಚೂಡಾಕರ್ಣನು ಅವನೊಡನೆ ಮಾತನಾಡುತ್ತ ನನ್ನನ್ನು ಹೆದರಿಸುವುದಕ್ಕಾಗಿ ಒಡೆದ ಬಿದಿರಿನ ತುಂಡಿನಿಂದ ನೆಲಕ್ಕೆ ಹೊಡೆದು ಶಬ್ದ ಮಾಡುತ್ತಿದ್ದನು. ಆಗ ವೀಣಾಕರ್ಣನು 'ಮಿತ್ರನೆ ನೀನು ನನ್ನ ಮಾತಿನಲ್ಲಿ ಆಸಕ್ತನಾಗದಿರಲು ಕಾರಣವೇನು' ಎಂದು ಕೇಳಿದನು. ಚೂಡಾಣರ್ಕನು 'ನೋಡು ಈ ಇಲಿಯು ಯಾವಾಗಲೂ ಮೇಲೆ ತೂಗುಹಾಕಿರುವ ನನ್ನ ಭಿಕ್ಷಾನ್ನವನ್ನು ತಿನ್ನುತ್ತಿರುವುದು' ಎಂದನು. ವೀಣಾಕರ್ಣನು ಅಲ್ಪಬಲವುಳ್ಳ ಈ ಇಲಿಯು ಇಷ್ಟು ಮೇಲಕ್ಕೆ ನೆಗೆಯಲು ಏನಾದರೂ ಕಾರಣವಿರಬೇಕು. ಯುವತಿಯು ಮುದುಕನನ್ನು ಕಾರಣವಿಲ್ಲದೆ ಅಕಸ್ಮಾತ್ ಚುಂಬಿಸಲಾರಳು. ಎಂದನು. ಚೂಡಾಕರ್ಣನು ಇದು ಹೇಗೆಂದು ಕೇಳಿದನು. ವೀಣಾಕರ್ಣನು ಹೇಳುತ್ತಾನೆ.

### ಐದನೆ ಕಥೆ

'ಗೌಡ ದೇಶದಲ್ಲಿ ಕೌಶಾಂಬಿಯೆಂಬ ಪಟ್ಟಣವಿದೆ. ಅಲ್ಲಿ ಚಂದನದಾಸ ನೆಂಬ ಹಣಗಾರನಾದ ವರ್ತಕನಿದ್ದನು. ಅವನು ಹಣದ ದರ್ಪದಿಂದ ಮುದಿ ವಯಸ್ಸಿನಲ್ಲಿ ಲೀಲಾವತಿಯೆಂಬ ಒಬ್ಬ ವರ್ತಕನ ಮಗಳನ್ನು ಮದುವೆ ಮಾಡಿಕೊಂಡನು. ಆದರೆ ತರುಣಿಯಾದ ಅವಳನ್ನು ಸಂತೋಷಗೊಳಿಸಲು ಆ ಮುದಿ ವರ್ತಕನು ಸಮರ್ಥನಾಗಲಿಲ್ಲ. ಆದರೆ ಆ ವೃದ್ಧ ಪತಿಯು ತನ್ನ ಸ್ವಭಾವದಂತೆ ಅವಳಲ್ಲಿ ಅತ್ಯಂತ ಪ್ರೀತಿಯುಳ್ಳವನಾಗಿದ್ದನು.

ಬಳಿಕ ಆ ಲೀಲಾವತಿಯು ತಾರುಣ್ಯವಶದಿಂದ ಕುಲ ಮರ್ಯಾದೆಯನ್ನು ತ್ಯಜಿಸಿ ಒಬ್ಬ ವರ್ತಕನ ಮಗನನ್ನು ಕಾಮಿಸಿದಳು. ಒಂದಾನೊಂದು ದಿನ ಆ ಲೀಲಾವತಿಯು ಮಂಚದ ಮೇಲೆ ಕುಳಿತು ವರ್ತಕನ ಮಗನೊಡನೆ ಸರಸ ಸಲ್ಲಾಪದಿಂದಿರಲು ಗಂಡನು ಅಲ್ಲಿಗೆ ಬಂದನು. ಕೂಡಲೆ ಅವಳು ಅಕಸ್ಮಾತ್ತಾಗಿ ಬಂದ ಪತಿಯನ್ನು ಕಂಡು ಎದ್ದು ಕೂದಲುಗಳನ್ನು ಹಿಡಿದುಕೊಂಡು ಗಾಢವಾಗಿ ಆಲಂಗಿಸಿ ಚುಂಬಿಸಿದಳು. ಹಾಗೆಯೇ ಇದಕ್ಕೆ ಯಾವುದೊ ಒಂದು ಕಾರಣವಿರುವುದು. ಅದು ಹೆಚ್ಚು ಹಣವಿರುವುದೇ ಆಗಿದೆ' ಎಂದು ಪಿಕಾಸಿ

ಯಿಂದ ಭೂಮಿಯನ್ನು ಅಗೆದು ಬಹುಕಾಲದಿಂದ ನಾನು ಗಳಿಸಿದ ಹಣವನ್ನು ತೆಗೆದುಕೊಂಡನು. ಆದರಿಂದ ನಾನು ನಿರ್ಬಲನಾಗಿದ್ದರೂ ಅತ್ಯಾಶೆಯಿಂದ ಆ ಹಣವನ್ನು ಪಡೆಯಲು ಮೆಲ್ಲನೆ ಹೋಗುತ್ತಿರಲು ವೀಣಾಕರ್ಣನು ಒಡೆದ ಬಿದಿರಿನಿಂದ ನನಗೆ ಹೊಡೆದನು. ಅದರಿಂದ ಬೇಸರಗೊಂಡ ನಾನು ಜನರಿಲ್ಲದ ಕಾಡಿಗೆ ಬರಲು ಪುಣ್ಯವಶದಿಂದ ನನಗೆ ನಿನ್ನ ಸ್ನೇಹವು ದೊರಕಿತು. ಈಗ ನಾನು ಸ್ವರ್ಗಸುಖವನ್ನೇ ಅನುಭವಿಸುತ್ತಿರುವೆನು' ಎಂದಿತು. ಮಂಥರವೆಂಬ ಆಮೆಯು ಹೇಳುತ್ತದೆ.

ಹೆಚ್ಚಾಗಿ ಕೂಡಿಡಬಾರದು. ಕೂಡಿಡಲು ಬಯಸಿದ ನರಿಯು ಬಿಲ್ಲಿನಿಂದ ಸತ್ತಿತು. ಕಾಗೆ ಇಲಿಗಳು 'ಅದು ಹೇಗೆ' ಎಂದು ಕೇಳಿದುವು. ಆಮೆಯು ಹೇಳುತ್ತದೆ :—

## ಆರನೆ ಕಥೆ

'ಕಲ್ಯಾಣಕಟಕದಲ್ಲಿ ಭೈರವನೆಂಬ ಬೇಡನಿದ್ದನು. ಅವನು ಒಂದಾನೊಂದು ದಿನ ಜಿಂಕೆಯನ್ನು ಹುಡುಕುತ್ತ ವಿಂಧ್ಯಾಟವಿಗೆ ಹೋದನು. ಅಲ್ಲಿ ಅವನು ಒಂದು ಜಿಂಕೆಯನ್ನು ಕೊಂದು ಅದನ್ನು ತೆಗೆದುಕೊಂಡು ಹೋಗುತ್ತ ಒಂದು ಭಯಂಕರವಾದ ಹಂದಿಯನ್ನು ಕಂಡು ಮೃಗವನ್ನು ನೆಲದಮೇಲಿಟ್ಟು ಹಂದಿಗೆ ಬಾಣದಿಂದ ಹೊಡೆದನು. ಆ ಹಂದಿಯು ಕೂಗುತ್ತ ಬೇಡನ ಅಂಡಕೋಶಕ್ಕೆ ತಿವಿಯಲು ಅವನು ನೆಲದ ಮೇಲೆ ಬಿದ್ದನು. ಬಳಿಕ ಅವರ ತುಳಿತದಿಂದ ಒಂದು ಸರ್ಪವೂ ಸತ್ತಿತು.

ತರುವಾಯ ಅಲ್ಲಿ ದೀರ್ಘರಾವವೆಂಬ ಒಂದು ನರಿಯು ಆಹಾರಕ್ಕಾಗಿ ಅಲೆಯುತ್ತ ಸತ್ತುಬಿದ್ದಿರುವ ಜಿಂಕೆ, ಬೇಡ, ಸರ್ಪ, ಹಂದಿ ಇವುಗಳನ್ನು ಕಂಡು ಚಿಂತಿಸಿತು. ನನಗೆ ಈ ದಿನ ದೊಡ್ಡಭೋಜನವು ಒದಗಿದೆ. ಇವುಗಳ ಮಾಂಸದಿಂದ ನನಗೆ ಮೂರು ತಿಂಗಳು ಕಳೆಯುವುದು. ಆದ್ದರಿಂದ ಮೊದಲು ಬಿಲ್ಲಿಗೆ ಕಟ್ಟಿರುವ ನಾಣನ್ನು ತಿನ್ನುವೆನು ಎಂದು ಹಾಗೆ ಮಾಡಲು ನಾಣು ತುಂಡಾಯಿತು. ಅದರಿಂದ ಮೇಲಕ್ಕೆ ಸಿಡಿದ ಬಿಲ್ಲಿನಿಂದ ಎದೆಗೆ ಹೊಡೆಯಲ್ಪಟ್ಟು ಆ ನರಿಯು ಸತ್ತಿತು. ಆದ್ದರಿಂದ ಹೆಚ್ಚು ಸಂಗ್ರಹ ಮಾಡಲು ಅಪೇಕ್ಷಿಸಬಾರದು. ಆದ್ದರಿಂದ ನೀನು ಇಲ್ಲಿಯೇ ವಾಸಮಾಡೆಂದಿತು. ಅವೆಲ್ಲ

ಹೀಗೆ ಅಲ್ಲಿ ಸುಖವಾಗಿ ವಾಸಮಾಡುತ್ತಿರಲು ಒಂದಾನೊಂದು ದಿನ ಚಿತ್ರಾಂಗನೆಂಬ ಜಿಂಕೆಯು ಯಾರಿಂದಲೋ ಹೆದರಿಸಲ್ಪಟ್ಟದ್ದಾಗಿ ಅಲ್ಲಿಗೆ ಬಂದು ಸೇರಿತು. ಹಿಂದೆ ಬರುತ್ತಿರುವ ಜಿಂಕೆಯನ್ನು ನೋಡಿ ಆಮೆಯು ನೀರನ್ನು ಹೊಕ್ಕಿತು. ಹಿರಣ್ಯಕನೂ ಬಿಲವನ್ನು ಸೇರಿದನು. ಕಾಗೆಯೂ ಮೇಲಕ್ಕೆ ಹಾರಿ ಮರದಲ್ಲಿ ಕುಳಿತಿತು. ಅನಂತರ ಅದು ಏನೂ ಭಯಕಾರಣವಿಲ್ಲವೆಂದು ಹೇಳಲು ಎಲ್ಲರೂ ಬಂದು ಒಟ್ಟಿಗೆ ಸೇರಿದರು. ಆಗ ಮಂಥರನು ಹೇಳಿದನು. 'ಮಂಗಳಕರನಾದ ಮೃಗವೇ ನಿನಗೆ ಸುಖಾಗಮನವಾಗಲಿ. ಇಲ್ಲಿ ನೀನು ಸ್ವೇಚ್ಛೆಯಿಂದ ನೀರು ಮೊದಲಾದ ಆಹಾರವನ್ನು ಸೇವಿಸುತ್ತ ನಮ್ಮ ಸ್ನೇಹಿತನಾಗಿ ವಾಸಿಸು. ನಿನಗೆ ಈ ನಿರ್ಜನವನದಲ್ಲಿ ಯಾರಿಂದ ಭಯವುಂಟಾಗಿದೆ? ಎಂದು ಕೇಳಿತು. ಮೃಗವು ಹೀಗೆ ಹೇಳಿತು. 'ಕಳಿಂಗದೇಶದಲ್ಲಿ ರುಕ್ಮಾಂಗದನೆಂಬ ರಾಜನಿರುವನು. ಅವನು ದಿಗ್ವಿಜಯ ಮಾಡುತ್ತ ಚಂದ್ರಭಾಗಾ ನದಿಯ ದಡದಲ್ಲಿ ಸೇನೆಯನ್ನು ತಂಗಿಸಿರುವನು. ಅವನು ಬೆಳಗ್ಗೆ ಕರ್ಪೂರ ಸರೋವರದ ಹತ್ತಿರ ಬರುವನೆಂಬ ಸಮಾಚಾರವು ಬೇಡರಿಂದ ತಿಳಿದಿದೆ. ಆದ್ದರಿಂದ ನಮಗೆಲ್ಲ ಇಲ್ಲಿರುವುದರಿಂದ ತೊಂದರೆಯಾಗಬಹುದು. ಅದಕ್ಕಾಗಿ ಏನಾದರೂ ಉಪಾಯವನ್ನು ಮಾಡಬೇಕು' ಎಂದಿತು. ಆಗ ಆಮೆಯು 'ಭಯದಿಂದ ನಾನು ಬೇರೆ ಕೊಳಕ್ಕೆ ಹೋಗುವೆನು' ಎಂದಿತು. ಮೃಗ ಕಾಗೆಗಳು ಹಾಗೆಯೇ ಮಾಡೆಂದುವು. ಹಿರಣ್ಯಕನು ನಕ್ಕು 'ಬೇರೆ ಕೊಳವನ್ನು ಸೇರಿದರೆ ಮಂಥರನಿಗೆ ಭಯವಿಲ್ಲ. ಸ್ಥಳದಲ್ಲಿ ಹೋಗುವಾಗ ಪ್ರತೀಕಾರವೇನು. ಇವನು ವರ್ತಕನ ಮಗನಂತೆ ದುಃಖಪಡಬೇಕಾದೀತು.' ಅದು ಹೇಗೆ ಎಂದು ಅವೆಲ್ಲ ಕೇಳಿದುವು. ಹಿರಣ್ಯಕನೆಂಬ ಇಲಿಯು ಹೇಳುತ್ತದೆ :—

## ಏಳನೆ ಕಥೆ

'ಕಾನ್ಯಕುಬ್ಜವೆಂಬ ದೇಶದಲ್ಲಿ ವೀರಸೇನನೆಂಬ ದೊರೆಯಿದ್ದನು. ಅವನು ತುಂಗಬಲನೆಂಬ ರಾಜಕುಮಾರನನ್ನು ವೀರಪುರವೆಂಬ ಪಟ್ಟಣದಲ್ಲಿ ಭೋಗಪತಿಯಾಗಿಸಿದನು. ಅತ್ಯಂತ ಹಣಗಾರನಾದ ಅವನು ಒಂದಾನೊಂದು ದಿನ ತನ್ನ ಪಟ್ಟಣದಲ್ಲಿ ಸಂಚರಿಸುತ್ತ ಯುವತಿಯಾದ ಲಾವಣ್ಯವತಿಯೆಂಬ ಒಬ್ಬ ವರ್ತಕನ ಮಗನ ಹೆಂಡತಿಯನ್ನು ಕಂಡು ಕಾಮಪೀಡಿತನಾಗಿ ಅವಳನ್ನು

ಸೇರಲು ದೂತಿಯನ್ನು ಕಳುಹಿಸಿದನು. ಆ ಲಾವಣ್ಯವತಿಯೂ ಆ ತುಂಗಬಲನನ್ನು ನೋಡಿದ ಕ್ಷಣದಿಂದ ಕಾಮಪೀಡಿತಳಾಗಿ ಅವನನ್ನೇ ಚಿಂತಿಸುತ್ತಿದ್ದಳು. ದೂತಿಯ ಮಾತನ್ನು ಕೇಳಿದ ಲಾವಣ್ಯವತಿಯು 'ನಾನು ಪತಿವ್ರತೆ. ಹೇಗೆ ಇಂತಹ ಅಧರ್ಮಕಾರ್ಯದಲ್ಲಿ ತೊಡಗುವೆನು. ನನ್ನ ಪ್ರಿಯನು ಅಪ್ಪಣೆ ಮಾಡಿದಂತೆ ನಾನು ಮಾಡುವೆನು' ಎಂದಳು. 'ದೂತಿಯು ಇದು ನಿಜವೊ ?' ಎಂದು ಕೇಳಿದಳು. ಲಾವಣ್ಯವತಿಯು 'ಸಂದೇಹವೇನು' ಎಂದಳು. ಬಳಿಕ ದೂತಿಯು ನಡೆದ ಸಮಾಚಾರವನ್ನೆಲ್ಲ ತುಂಗಬಲನಿಗೆ ತಿಳಿಸಿ 'ಇದು ಯುಕ್ತಿಯಿಂದ ಸಾಧ್ಯ' ಎಂದಳು. ರಾಜಕುಮಾರನು 'ಅದು ಹೇಗೆ' ಎಂದು ಕೇಳಿದನು. ಕುಟ್ಟನಿಯು ಹೀಗೆಂದಳು.

## ಎಂಟನೆ ಕಥೆ

'ಬ್ರಹ್ಮಾರಣ್ಯದಲ್ಲಿ ಕರ್ಪೂರತಿಲಕವೆಂಬ ಆನೆಯಿದ್ದಿತು. ಅದನ್ನು ನೋಡಿ ಎಲ್ಲ ನರಿಗಳೂ ಆಲೋಚಿಸಿದುವು. ಈ ಆನೆಯು ಮಡಿದರೆ ಇದರ ದೇಹದಿಂದ ನಮಗೆ ನಾಲ್ಕು ತಿಂಗಳವರೆಗೆ ಭೋಜನವಾಗುವುದು ಎಂದು. ಆಗ ಅಲ್ಲಿರುವ ಒಂದು ಮುದಿನರಿಯು ನನ್ನ ಬುದ್ಧಿಸಾಮರ್ಥ್ಯದಿಂದ ಇದನ್ನು ಸಾಯಿಸುವೆನು ಎಂದು ಪ್ರತಿಜ್ಞೆಮಾಡಿತು. ಅದರಂತೆ ಅದು ಕರ್ಪೂರತಿಲಕನ ಹತ್ತಿರ ಹೋಗಿ 'ನಾನು ನರಿ. ನನ್ನನ್ನು ಎಲ್ಲ ಕಾಡಿನ ಪ್ರಾಣಿಗಳು ಸೇರಿ ನಿನ್ನ ಹತ್ತಿರ ಕಳುಹಿಸಿದ್ದಾರೆ. ರಾಜನಿಲ್ಲದಿರುವುದು ಉಚಿತವಲ್ಲ. ಆದ್ದರಿಂದ ಸಕಲ ರಾಜಗುಣಗಳಿರುವ ನಿನ್ನನ್ನು ಕಾಡಿನ ರಾಜ್ಯದಲ್ಲಿ ಅಭಿಷೇಕ ಮಾಡಲು ಆಲೋಚಿಸಿರುತ್ತಾರೆ. ಅದರಿಂದ ಅಭಿಷೇಕದ ಲಗ್ನವೇಳೆಯು ಮೀರದಂತೆ ಬೇಗನೆ ಬಾ' ಎಂದು ಹೊರಟಿತು. ಅನಂತರ ರಾಜ್ಯದ ಆಶೆಯುಳ್ಳ ಕರ್ಪೂರತಿಲಕನು ನರಿಯ ಹಿಂದೆ ಓಡುತ್ತ ಹೆಚ್ಚಾದ ಕೆಸರಿನಲ್ಲಿ ಮುಳುಗಿತು. ಬಳಿಕ ಅದು 'ಎಲೈ ಮಿತ್ರ ನರಿಯೆ ಈಗ ನಾನು ಏನನ್ನು ಮಾಡಲಿ ! ಕೆಸರಿನಲ್ಲಿ ಬಿದ್ದು ಸಾಯುತ್ತಿದ್ದೇನೆ. ಹಿಂದುರುಗಿ ನೋಡು ? ಎಂದಿತು. ನರಿಯು ನಕ್ಕು 'ಸ್ವಾಮಿ ನೀನು ನನ್ನ ಬಾಲವನ್ನು ಹಿಡಿದುಕೊಂಡು ಮೇಲಕ್ಕೇಳು ನನ್ನಂತಹವನ ಮಾತನ್ನು ನಂಬಿದ್ದರಿಂದ ನಿವಾರಿಸಲಾಗದ ದುಃಖವನ್ನು ಅನುಭವಿಸು'

ಎಂದಿತು. ಬಳಿಕ ಕೆಸರಿನಲ್ಲಿ ಮುಳುಗಿದ ಆನೆಯನ್ನು ನರಿಗಳು ಭಕ್ಷಿಸಿದುವು. ಆದ್ದರಿಂದ ಯುಕ್ತಿಯಿಂದಾಗುವ ಕೆಲಸವು ಶಕ್ತಿಯಿಂದಾಗುವುದಿಲ್ಲ.'

ಬಳಿಕ ರಾಜಕುಮಾರನು ತಲೆಹಿಡಿಕಿಯ ಮಾತಿನಂತೆ ಆ ಚಾರುದತ್ತನೆಂಬ ವರ್ತಕನ ಮಗನನ್ನು ತನಗೆ ಸೇವಕನನ್ನಾಗಿ ಮಾಡಿಕೊಂಡು ನಂಬಿಕೆಯ ಕೆಲಸದಲ್ಲಿ ಅವನನ್ನು ನೇಮಿಸುತ್ತಿದ್ದನು. ಒಂದಾನೊಂದು ದಿನ ಆ ರಾಜ ಕುಮಾರನು ಮಿಂದು ಅಲಂಕಾರಗೊಂಡು ಚಾರುದತ್ತನನ್ನು ಕುರಿತು 'ಈ ದಿನ ಮೊದಲ್ಗೊಂಡು ನಾನು ಒಂದು ತಿಂಗಳು ಗೌರೀವ್ರತವನ್ನಾಚರಿಸಬೇಕು. ಆದ್ದರಿಂದ ನೀನು ಪ್ರತಿರಾತ್ರಿ ಒಬ್ಬೊಬ್ಬ ಕುಲೀನ ಯುವತಿಯನ್ನು ಕರೆದು ಕೊಂಡುಬಂದು ನನಗೆ ಒಪ್ಪಿಸು. ನಾನು ಅವಳನ್ನು ಶಾಸ್ತ್ರರೀತಿಯಿಂದ ಪೂಜಿಸುತ್ತೇನೆ' ಎಂದನು ಚಾರುದತ್ತನು ಅದರಂತೆ ಅಂತಹ ಯುವತಿ ಯನ್ನು ಸಮರ್ಪಿಸಿ ತಾನು ರಾಜಕುಮಾರನು ಏನು ಮಾಡುವನೆಂದು ಅಡಗಿ ಕೊಂಡು ನೋಡುತ್ತಿದ್ದನು. ಆ ರಾಜಕುಮಾರನು ಆ ತರುಣಿಯನ್ನು ಮುಟ್ಟದೆ ದೂರದಿಂದಲೇ ವಸ್ತ್ರಾದಿಗಳನ್ನಿತ್ತು ಪೂಜಿಸಿ ಕಾವಲುಗಾರನನ್ನು ಕೊಟ್ಟು ಮನೆಗೆ ಕಳುಹಿಸುತ್ತಿದ್ದನು. ಬಳಿಕ ಆ ವರ್ತಕನ ಮಗನು ನಂಬಿ ಆಶೆಗೊಂಡು ತನ್ನ ಸತಿ ಲಾವಣ್ಯವತಿಯನ್ನು ಕರೆತಂದು ರಾಜಕುಮಾರನಿಗೆ ಒಪ್ಪಿಸಿದನು. ರಾಜಕುಮಾರನು ಅವಳನ್ನು ತನ್ನ ಪ್ರೀತಿಪಾತ್ರಳಾದ ಲಾವಣ್ಯವತಿಯೆಂದು ತಿಳಿದು ಸಡಗರದಿಂದೆದ್ದು ಗಾಢವಾಗಿ ಆಲಿಂಗಿಸಿ ಕಣ್ಣನ್ನು ಮುಚ್ಚಿಕೊಂಡು ಮಂಚದಮೇಲೆ ಅವಳೊಡನೆ ರಮಿಸಿದನು. ಅದನ್ನು ನೋಡಿ ವರ್ತಕನ ಮಗನು ಏನನ್ನೂ ಮಾಡಲರಿಯದವನಾಗಿ ವ್ಯಥೆ ಗೊಂಡನು. ಆದ್ದರಿಂದ ಶಕ್ತಿಯಿಂದಾಗದ ಕೆಲಸವು ಯುಕ್ತಿಯಿಂದಾಗುವು ದೆಂದರಿಯಬೇಕು. ಆದ್ದರಿಂದ ನೀನು ವರ್ತಕನ ಮಗನಂತೆ ವ್ಯಥೆಪಡಬೇಡ' ಎಂದಿತು. ಮಂಥರನು ಈ ಮಾತನ್ನು ಮೀರಿ ಅತ್ಯಂತ ಭಯದಿಂದ ಮೂಢ ನಾಗಿ ಕೊಳವನ್ನು ತ್ಯಜಿಸಿ ಹೊರಟನು ಆ ಹಿರಣ್ಯಕ ಮೊದಲಾದವರೂ ಪ್ರೀತಿಯಿಂದ ಅನಿಷ್ಟವನ್ನು ಊಹಿಸುತ್ತ ಅದನ್ನು ಹಿಂಬಾಲಿಸಿದರು. ಬಳಿಕ ನೆಲದಮೇಲೆ ಹೋಗುತ್ತಿರುವ ಆಮೆಯನ್ನು ಅಲ್ಲಿ ಸಂಚರಿಸುತ್ತಿದ್ದ ಒಬ್ಬ ಬೇಡನು ಹಿಡಿದು ಬಿಲ್ಲಿನಲ್ಲಿ ಕಟ್ಟಿಕೊಂಡು ತನ್ನ ಮನೆಗೆ ಹೊರಟನು. ಆಗ ಜಿಂಕೆ, ಕಾಗೆ, ಇಲಿಗಳು ಅತ್ಯಂತ ವ್ಯಥೆಗೊಂಡು ಅವನನ್ನು ಹಿಂಬಾಲಿಸಿದುವು.

ಬಳಿಕ ಹಿರಣ್ಯಕನು ದುಃಖದಿಂದ ಚಿತ್ರಾಂಗ ಲಘುಪತನಕರನ್ನು ಕುರಿತು ಮಂಥರನನ್ನು ಬಿಡಿಸಲು ಹೀಗೆ ಉಪಾಯವನ್ನು ಹೇಳಿದನು. 'ಚಿತ್ರಾಂಗನು ನೀರಿನ ಹತ್ತಿರಹೋಗಿ ತನ್ನನ್ನು ಸತ್ತವನಂತೆ ತೋರಿಸಿಕೊಳ್ಳಲಿ. ಕಾಗೆಯು ಅವನಮೇಲೆ ಕೂತು ಕೊಕ್ಕಿನಿಂದ ಕುಕ್ಕುತ್ತಿರಲಿ. ಆಗ ಬೇಡನು ಜಿಂಕೆಯ ಮಾಂಸವನ್ನು ಬಯಸುವವನಾಗಿ ಆಮೆಯನ್ನು ಕೆಳಗಿಟ್ಟು ಬೇಗನೆ ಮೃಗದ ಹತ್ತಿರ ಹೋಗುವನು. ಬಳಿಕ ನಾನು ಮಂಥರನ ಕಟ್ಟನ್ನು ಕತ್ತರಿಸುವೆನು. ಬೇಡನು ಹತ್ತಿರಬಂದ ಕೂಡಲೇ ನೀವಿಬ್ಬರೂ ಓಡಿಹೋಗಿರಿ.' ಇದರಂತೆ ಚಿತ್ರಾಂಗಲಘುಪತನಕರು ಮಾಡಲು ಬಳಲಿದ ಬೇಡನು ನೀರನ್ನು ಕುಡಿದು ಮರದ ಕೆಳಗೆ ಕೂತವನಾಗಿ ಅಂತಹ ಜಿಂಕೆಯನ್ನು ಕಂಡನು. ಕೂಡಲೆ ಕತ್ತರಿಯನ್ನು ತೆಗೆದುಕೊಂಡು ಮೃಗದ ಹತ್ತಿರಕ್ಕೆ ಹೋದನು. ಈ ನಡುವೆ ಹಿರಣ್ಯಕನು ಆಮೆಯ ಕಟ್ಟನ್ನು ಕತ್ತರಿಸಿದನು. ಆ ಆಮೆಯು ನೀರಿನೊಳಗೆ ಹೊಕ್ಕಿತು. ಆ ಜಿಂಕೆಯು ಸಮೀಪಕ್ಕೆ ಬಂದ ಬೇಡನನ್ನು ಕಂಡು ಎದ್ದು ಓಡಿಹೋಯಿತು. ಬೇಡನು ಹಿಂದಿರುಗಿ ಬರುವಷ್ಟರಲ್ಲಿ ಆಮೆಯಿರಲಿಲ್ಲ. ಆಗ ಅವನು ಆಲೋಚಿಸದೆ ಕೆಲಸವನ್ನು ಮಾಡಿದ ನನಗೆ ಇದು ಯೋಗ್ಯವಾದುದೆ. ಎಂದು ಆಲೋಚಿಸುತ್ತ ತನ್ನ ಸ್ಥಳಕ್ಕೆ ಹೊರಟುಹೋದನು. ಮಂಥರಾದಿಗಳು ಆಪತ್ತಿನಿಂದ ಪಾರಾಗಿ ತಮ್ಮ ಸ್ಥಳಕ್ಕೆ ಹೋಗಿ ಸುಖವಾಗಿದ್ದುವು '

---

## ಪರೀಕ್ಷೆಯ ಮಾದರಿ ಪ್ರಶ್ನೆಗಳು

೧. (ಅ) ಈ ಹಿತೋಪದೇಶವನ್ನು ಯಾವ ಕವಿ ಬರೆದನು? ಅವನ ಕಾಲ ಮತ್ತು ದೇಶಗಳನ್ನು ಬರೆಯಿರಿ.

(ಆ) ಈ ಹಿತೋಪದೇಶಕ್ಕೆ ಮೂಲಗ್ರಂಥವಾವುದು? ಇದರಲ್ಲಿ ಎಷ್ಟು ಪ್ರಕರಣಗಳಿವೆ? ಅವು ಯಾವುವು?

(ಇ) 5 ಮತ್ತು 6 ನೆ ಕಥೆಗಳ ಸಾರಾಂಶವನ್ನು ಬರೆದು ಅವುಗಳಿಂದ ತಿಳಿಯುವ ಬುದ್ಧಿವಾದವನ್ನು ತಿಳಿಸಿರಿ.

(ಈ) ಅಜ್ಞಾತಕುಲಶೀಲವುಳ್ಳವನಿಗೆ ವಾಸಸ್ಥಳವನ್ನು ಕೊಡಕೂಡದೆಂಬುದನ್ನು ಉದಾಹರಣೆ ಸಹಿತವಾಗಿ ವಿವರಿಸಿರಿ.

೨. (ಅ) ಈ ಪದ್ಯಗಳಿಗೆ ಅನ್ವಯಾನುಸಾರವಾಗಿ ಅರ್ಥವನ್ನು ಬರೆಯಿರಿ.
೬, ೨೧, ೩೧, ೪೬, ೭೦, ೭೭, ೮೨, ೯೧, ೧೦೩, ೧೦೭, ೧೪೭, ೧೫೪.

(ಆ) ಈ ಪದ್ಯಗಳಿಗೆ ತಾತ್ಪರ್ಯವನ್ನು ಬರೆಯಿರಿ :—
೧೦, ೧೨, ೧೭, ೨೩, ೫೦, ೫೯, ೬೯, ೭೨, ೮೦, ೮೬, ೧೧೧, ೧೧೮.

(ಇ) ಇವುಗಳನ್ನು ವಿವರಿಸಿ.

१) प्रायस्समापन्नविपत्तिकाले धियोऽपि पुंसां मलिना भवन्ति ।

२) तुषेणापि परित्यक्ता न प्ररोहन्ति तण्डुलाः ।

३) कालो हि व्यसनप्रसारितकरो गृह्णाति दूरादपि ।

४) सुतप्तमपि पानीयं शमयत्येव पावकम् ।

५) प्रक्षालनाद्धि पङ्कस्य दूरादस्पर्शनं वरम् ।

೩. (ಅ) ಆರು ದೋಷಗಳಾವುವು? ಮಹಾತ್ಮರ ಪ್ರಕೃತಿ ಸಿದ್ಧವಾದ ಗುಣಗಳಾವುವು? ಪುರುಷಾರ್ಥಗಳಾವುವು?

(ಆ) ಸ್ವಲ್ಪಕಾಲ ಮಾತ್ರ ಉಪಭೋಗಿಸಲು ಯೋಗ್ಯವಾದುವು ಯಾವುವು? ಹೆಂಗಸರ ಸ್ವಾಭಾವಿಕ ದೋಷಗಳಾವುವು.

೪. ಈ ಶಬ್ದಗಳ ಅರ್ಥವನ್ನು ಬರೆಯಿರಿ :—

ಕೃತಾಂತಃ, ಪಾಶಾನ್, ಅನುಚರೇಣ, ಶಾವಕಾಃ, ಕುಟ್ಟನೀ, ಪಂಚತ್ವಂ, ಉಡ್ಡೀಯ, ಪ್ರಚ್ಛನ್ನಃ, ವಿಹಸ್ಯ, ಶಂಕಮಾನಾಃ.

೫. ಇವರು ಯಾರು ? ಇವರ ವಿಷಯವನ್ನು ತಿಳಿಸಿ:—

ಶುಂಗಬಲಃ, ಹಿರಣ್ಯಕಃ, ದೀರ್ಘಕರ್ಣಃ, ಚೂಡಾಕರ್ಣಃ, ಲೀಲಾವತೀ.



# ನಮ್ಮಲ್ಲಿ ಬಿಕರಿಗೆ ಸಿದ್ಧವಾಗಿರುವ ಗ್ರಂಥಗಳು



| | | |
|---|---|---|
| ಸಂಸ್ಕೃತಾದರ್ಶ ಭಾಗ ೧ | .... | ಬೆಲೆ 0=70 |
| ,, ,, ಭಾಗ ೨ | .... | 0=75 |
| ಅಮರಕೋಶ ಪ್ರಥಮ ಕಾಂಡ<br>(ಕನ್ನಡ ಲಿಪಿ ತಿದ್ದಿದ ಅಂದವಾದ ಮುದ್ರಣ) | .... | 0=20 |
| ,, ತ್ರಿಕಾಂಡ | .... | 1=00 |
| ಭಾಷಾಂತರ ಪಾಠಗಳು (ಎನ್. ಆರ್. ಶರ್ಮಾ) | | 0=60 |
| ರಘುವಂಶ ೫ನೆ ಸರ್ಗ<br>(ಕನ್ನಡ ಪ್ರತಿಪದಾರ್ಥ ತಾತ್ಪರ್ಯಾದಿಗಳಿಂದ ಕೂಡಿದೆ)<br>1971–74 ಪ್ರಥಮ ಪರೀಕ್ಷೆಯ ಟೆಕ್ಸ್ಟ | .... | 1=12 |
| ಶ್ರೀಸುಮಧ್ವವಿಜಯ 1–16 ಸರ್ಗಗಳು ಪೂರ್ತಿ<br>(ಕನ್ನಡ ಟೀಕಾಸಹಿತ) | | 12=00 |
| ರಘುವಂಶ ೧ನೆ ಸರ್ಗ<br>ಪ್ರಥಮ ಎರಡನೆ ತರಗತಿ ಟೆಕ್ಸ್ಟ.<br>(ಕನ್ನಡ ಅರ್ಥಾದಿಗಳಿಂದ ಕೂಡಿದೆ.) | | ಅಚ್ಚಿನಲ್ಲಿದೆ |

ದೊರೆಯುವ ಸ್ಥಳ

**K. NARASIMHACHAR**
46, IV Main Road, Chamarajapet,
BANGALORE-18.

---

Printed at Sri Mallikarjuna Press, B-2